*Department of Public Instruction, Mysore*

ಕನ್ನಡ

# ಪ್ರಥಮ ವ್ಯಾಕರಣ



ಬೆಂಗಳೂರು :
ಮೈಸೂರು ಸರ್ಕಾರದ ಮುದ್ರಣಾಲಯದ ಡೈರೆಕ್ಟರವರಿಂದ
ಮುದ್ರಿಸಲ್ಪಟ್ಟಿತು
1955

ಕ್ರಯ [illegible]

# ಮುನ್ನುಡಿ

ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಆಡಳಿತಕ್ಕೆ ಒಳಪಟ್ಟ ಪ್ರಾಥಮಿಕ, ಮಾಧ್ಯಮಿಕ ಮತ್ತು ಹೈಸ್ಕೂಲು ತರಗತಿಗಳಲ್ಲಿ ಓದುವ ವಿದ್ಯಾರ್ಥಿಗಳ ಉಪಯೋಗಕ್ಕೆ ಬೇಕಾದ ಕನ್ನಡ ವ್ಯಾಕರಣಗಳನ್ನು ಸಿದ್ಧಗೊಳಿಸುವುದಕ್ಕಾಗಿ ಮ॥ ರಾ॥ ಗಳಾದ ಬಿ. ವೆಂಕಟನಾರಣಪ್ಪ, ಎಂ.ಎ., (ಅಧ್ಯಕ್ಷರು), ಪಂಡಿತ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರು, ಡಾ॥ ಎ. ಎಸ್. ನರಸಿಂಹಯ್ಯ, ಎಂ.ಎ., ಎಲ್.ಟಿ., ಪಿಹೆಚ್.ಡಿ., ಟಿ. ಎಸ್. ವೆಂಕಣ್ಣಯ್ಯ, ಎಂ.ಎ., ಎ. ಆರ್. ಕೃಷ್ಣ ಶಾಸ್ತ್ರಿ, ಎಂ.ಎ. ಮತ್ತು ಟಿ. ಎಸ್. ಶ್ರೀಕಂಠಯ್ಯ, ಎಂ.ಎ.,—ಇವರನ್ನೊಳಗೊಂಡ ಒಂದು ಸಮಿತಿಯನ್ನು ಸರ್ಕಾರದವರು ನಿಯಮಿಸಿ, ಈ ಸಮಿತಿಯ ಸಲಹೆಗಳಿಗನುಸಾರವಾಗಿ ಡಾ॥ ಎ. ಎಸ್. ನರಸಿಂಹಯ್ಯನವರು, ಪ್ರಾಥಮಿಕ ತರಗತಿಗಳಿಗಾಗಿಯೂ, ಟಿ. ಎಸ್. ಶ್ರೀಕಂಠಯ್ಯನವರು, ಮಾಧ್ಯಮಿಕ ತರಗತಿಗಳಿಗಾಗಿಯೂ, ಟಿ. ಎಸ್. ವೆಂಕಣ್ಣಯ್ಯನವರು, ಹೈಸ್ಕೂಲು ತರಗತಿಗಳಿಗಾಗಿಯೂ ಒಂದೊಂದು ವ್ಯಾಕರಣವನ್ನು ಬರೆಯಬೇಕೆಂದು ಗೊತ್ತುಮಾಡಿದರು. ಈಚೆಗೆ ಶ್ರೀಮಾನ್ ಬಿ. ವೆಂಕಟನಾರಣಪ್ಪನವರು ಕಾರಣಾಂತರದಿಂದ ಸಮಿತಿಯ ಸದಸ್ಯತ್ವವನ್ನು ಬಿಟ್ಟಿದ್ದರಿಂದ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರಿಗೆ ಸಮಿತಿಯ ಅಧ್ಯಕ್ಷತೆಯನ್ನು ವಹಿಸಲಾಯಿತು.

ಮೇಲೆ ಹೇಳಿದ ಸಮಿತಿಯ ಸಲಹೆಗಳಿಗನುಸಾರವಾಗಿ ರಚಿತವಾದ ಗ್ರಂಥಗಳಲ್ಲಿ ಡಾ॥ ಎ. ಎಸ್. ನರಸಿಂಹಯ್ಯನವರು ಬರೆದ ಈ "ಕನ್ನಡ ಪ್ರಥಮ ವ್ಯಾಕರಣ"ವು ಮೊದಲನೆಯದು. ಮಿಕ್ಕ ಎರಡು ವ್ಯಾಕರಣಗಳು ಪ್ರಕಟಣೆಗೆ ಸಿದ್ಧವಾಗುತ್ತಿವೆ.

# ವಿಷಯಾನುಕ್ರಮಣಿಕೆ

## ಒಂದನೆಯ ಭಾಗ

## ಎರಡನೆಯ ಭಾಗ

## ಮೂರನೆಯ ಭಾಗ

# ಕನ್ನಡ ಪ್ರಥಮ ವ್ಯಾಕರಣ

## ಒಂದನೆಯ ಭಾಗ

### ಪಾಠ ೧

### ವಾಕ್ಯ, ಪದ

೧. ಕೋಗಿಲೆ ಕೂಗುತ್ತದೆ. ಇಲ್ಲಿರುವ ಪದಗಳನ್ನು ಬಿಡಿಸಿ ಹೇಳಿ.
೨. ಗಿಳಿ ಹಣ್ಣನ್ನು ತಿನ್ನುತ್ತದೆ. ,,
೩. ಕತ್ತೆ ಅರಚುತ್ತದೆ. ,,
೪. ಹಸು ಹುಲ್ಲನ್ನು ಮೇಯುತ್ತದೆ. ,,
೫. ನಾಯಿ ಓಡುತ್ತದೆ. ,,

ಮೇಲೆ ಕೆಲವು ಕಡೆ ಎರಡು ಮಾತುಗಳೂ, ಕೆಲವು ಕಡೆ ಮೂರು ಮಾತುಗಳೂ ಇವೆ. 'ಕೋಗಿಲೆ' ಎಂದು ಮಾತ್ರ ಹೇಳಿಬಿಟ್ಟರೆ ಅಭಿಪ್ರಾಯ ಪೂರ್ತಿಯಾಗುವುದಿಲ್ಲ. 'ಕೂಗುತ್ತದೆ' ಎಂದಿಷ್ಟೇ ಹೇಳಿದರೂ 'ಯಾವುದು?' ಎಂದು ಕೇಳಬೇಕಾಗುತ್ತದೆ. ಅರ್ಥವು ಪೂರ್ತಿಯಾಗಿ ನಮಗೆ ತಿಳಿಯಬೇಕಾದರೆ ಎರಡು ಪದಗಳಾದರೂ ಇರಬೇಕು.

'ಕೋಗಿಲೆ ಕೂಗುತ್ತದೆ'—ಇಲ್ಲಿ ಎರಡು ಪದಗಳು ಸೇರಿ ಪೂರ್ಣವಾದ ಅರ್ಥವನ್ನು ತಿಳಿಸುತ್ತವೆ.

ಸಿಕ್ಕಿದಹಾಗೆ ಎರಡು ಪದಗಳನ್ನು ಸೇರಿಸಿದರೆ—'ಸಿಡಿಲು ಮನೆ' ಎಂದರೆ—ಅಭಿಪ್ರಾಯ ಪೂರ್ತಿಯಾಗುವುದಿಲ್ಲ. ಅಭಿಪ್ರಾಯ ಪೂರ್ತಿಯಾಗುವಂತೆ ಪದಗಳನ್ನು ಜೋಡಿಸಬೇಕು. ಅರ್ಥವು ಪೂರ್ಣವಾಗುವಂತೆ ಜೋಡಿಸಿದ ಪದಗಳ ಗುಂಪಿಗೆ 'ವಾಕ್ಯ' ಎಂದು ಹೆಸರು.

## ಅಭ್ಯಾಸ

(೧) ಕೆಳಗೆ ಕೊಟ್ಟಿರುವ ಮಾತುಗಳನ್ನು ಉಪಯೋಗಿಸಿ ವಾಕ್ಯಗಳನ್ನು ಬರೆಯಿರಿ :—*

ಹಾರುತ್ತವೆ, ಹುಲ್ಲನ್ನು, ಅಳುತ್ತವೆ, ಮಗು, ಸಿಂಹ, ಬುಸುಗುಟ್ಟುತ್ತವೆ, ದುಂಬಿಗಳು, ಎಲೆಗಳು, ಗಾಳಿ, ಬೆಳೆಯುವುವು.

(೨) ಈ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಸೇರಿಸಿ:—*

೧. ದುಂಬಿಗಳು ಜೇನನ್ನು —. ೨. — ಧೂಳನ್ನು ತರುವುದು. ೩. ಎಲೆಗಳು ಮೊಗ್ಗನ್ನು —. ೪. ಯಜಮಾನನು — ನೋಡಿದನು. ೫. — ಮಾತನ್ನು ಕೇಳಿತು. ೬. ಸಮಾಚಾರವನ್ನು —. ೭. ಹುಡುಗನು — ಓದುತ್ತಾನೆ. ೮. ಮಗು —. ೯. ಬೆಕ್ಕು ನಾಯಿಯನ್ನು ಕಂಡರೆ —. ೧೦. — ಮಾತನಾಡುತ್ತಾರೆ. ೧೧. — ಬುಸುಗುಟ್ಟುತ್ತದೆ.

---

## ಪಾಠ ೨

### ಕರ್ತೃಪದ

| | |
|---|---|
| ರಾಮನು ಓಡಿದನು. | ಯಾರು ಓಡಿದರು ? |
| ಕಲ್ಲು ತಗುಲಿತು. | ಏನು ತಗುಲಿತು ? |
| ಭೀಮನು ಬಿದ್ದನು. | ಯಾರು ಬಿದ್ದರು ? |
| ಬಟ್ಟೆ ಹರಿಯಿತು. | ಏನು ಹರಿಯಿತು ? |
| ಕೃಷ್ಣನು ಅತ್ತನು. | ಅತ್ತವರು ಯಾರು ? |
| ಕನ್ನಡಿ ಒಡೆಯಿತು. | ಏನು ಒಡೆಯಿತು ? |
| ನೀರು ಸುರಿಯಿತು. | ಏನು ಸುರಿಯಿತು ? |

ಮೇಲಿನ ಮಾತುಗಳಲ್ಲಿ ರಾಮ, ಕಲ್ಲು, ಭೀಮ, ಬಟ್ಟೆ, ಕೃಷ್ಣ, ಕನ್ನಡಿ, ನೀರು—ಇವು ಮನುಷ್ಯರ ಅಥವಾ ಪದಾರ್ಥಗಳ ಹೆಸರುಗಳು.

---

* ಮೇಲೆ ಗೀಟುಗಳ ಸ್ಥಳದಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ.

ಸೇವಕನನ್ನು, ಹಾವು, ಪಾಠವನ್ನು, ಮಗು, ಹೇಳು, ಹೆದರುತ್ತದೆ, ಹುಡುಗರು, ಕೂಡಿಸುತ್ತವೆ, ಕಾಪಾಡುವುವು, ಗಾಳಿ, ಅಳುತ್ತದೆ.

ಹೀಗೆ ಮನುಷ್ಯನ ಅಥವಾ ಪದಾರ್ಥದ ಹೆಸರುಗಳನ್ನು ಸೂಚಿಸುವ ಮಾತುಗಳಿಗೆ ನಾಮಪದಗಳೆಂದು ಹೆಸರು.

§ ಕೆಲಸವನ್ನು ಮಾಡುವವನ, ಅಥವಾ ಮಾಡುವ ವಸ್ತುವಿನ ಹೆಸರನ್ನು ಸೂಚಿಸುವ ನಾಮಪದಕ್ಕೆ '**ಕರ್ತೃಪದ**' ಎಂದು ಹೆಸರು.

## ಅಭ್ಯಾಸ

(೧) ಕೆಳಗಿನ ವಾಕ್ಯಗಳಲ್ಲಿ ಕರ್ತೃಪದಗಳನ್ನು ಕಂಡುಹಿಡಿಯಿರಿ :—

೧. ಸೂರ್ಯನು ಹುಟ್ಟುತ್ತಾನೆ. ೨. ಜನರು ಬಂದರು. ೩. ಕೋಗಿಲೆ ಕೂಗುತ್ತದೆ. ೪. ಬೆಂಕಿ ಸುಡುತ್ತದೆ. ೫. ಬೆಲ್ಲ ಮುಗಿಯಿತು. ೬. ರಾಜನು ಕೊಡುತ್ತಾನೆ. ೭. ಸೇವಕನು ಓಡಿದನು. ೮. ಕಾವೇರಿ ಧುಮುಕುತ್ತದೆ. ೯. ಹುಡುಗರು ನಿಂತರು. ೧೦. ಹಕ್ಕಿಗಳು ಹಾರಿದುವು.

(೨) ಈ ವಾಕ್ಯಗಳಲ್ಲಿ ಗೀಟು ಹಾಕಿರುವ ಕಡೆ ಸರಿಯಾದ ಕರ್ತೃಪದಗಳನ್ನು ಸೇರಿಸಿ.—*

೧. — ಓಡಿದನು. ೨. — ನಿಂತಿತು. ೩. — ಹರಿಯಿತು. ೪. — ಹೆಚ್ಚಿದೆ. ೫. — ಬರುತ್ತದೆ. ೬. — ಒಡೆಯಿತು. ೭. — ಹಾರುತ್ತದೆ. ೮. — ಬಿದ್ದಿತು. ೯. — ಚೆಲ್ಲಿತು. ೧೦. —ಹುಟ್ಟಿದನು.

---

## ಪಾಠ ೩

### ಕ್ರಿಯಾಪದ Verb

| | | |
|---|---|---|
| ಸೀತೆ | **ಬಿದ್ದಳು.** | ಸೀತೆ ಏನಾದಳು ? |
| ಬಟ್ಟೆ | **ಹರಿಯಿತು.** | ಬಟ್ಟೆ ಏನಾಯಿತು ? |
| ಸೇವಕನು | **ಓಡಿದನು.** | ಸೇವಕನು ಏನು ಮಾಡಿದನು ? |
| ಹಕ್ಕಿ | **ಹಾರಿತು.** | ಹಕ್ಕಿ ಏನು ಮಾಡಿತು ? |
| ಕಲ್ಲು | **ಒಡೆಯಿತು.** | ಕಲ್ಲು ಏನಾಯಿತು ? |

* ಮೇಲೆ ಗೀಟಿರುವ ಸ್ಥಳದಲ್ಲಿ ಈ ಪಟ್ಟಿಯಿಂದ ಪದಗಳನ್ನು ಆರಿಸಿ ಸೇರಿಸಬೇಕು :—
ಸೂರ್ಯನು, ಹುಡುಗನು, ಮಳೆ. ಹಕ್ಕಿ, ಹಾಲು, ಕನ್ನಡಿ, ಮರ, ನೀರು, ಗಾಡಿ, ಜ್ವರ.

ಈ ವಾಕ್ಯಗಳಲ್ಲಿ ಬಿದ್ದಳು, ಹರಿಯಿತು, ಓಡಿದನು, ಹಾರಿತು, ಒಡೆಯಿತು—ಎಂಬ ಮಾತುಗಳು ರಾಮು, ನೀರು, ಕನ್ನಡಿ ಎಂಬ ಶಬ್ದಗಳಂತೆ ಪದಾರ್ಥಗಳ ಹೆಸರುಗಳಲ್ಲ. ಪದಾರ್ಥಗಳು ಮಾಡಿದ ಕೆಲಸಗಳನ್ನು ತಿಳಿಸುವುವು. ಹೀಗೆ ಕೆಲಸವನ್ನು ತಿಳಿಸುವ ಮಾತಿಗೆ 'ಕ್ರಿಯಾಪದ' ಎಂದು ಹೆಸರು. 'ಕ್ರಿಯಾ' ಎಂದರೆ ಕೆಲಸ.

§ ಕರ್ತೃವು ಮಾಡಿದ ಕೆಲಸವನ್ನು ಸೂಚಿಸುವ ಪದಕ್ಕೆ 'ಕ್ರಿಯಾಪದ' ಎಂದು ಹೆಸರು.

ಅಭ್ಯಾಸ

(೧) ಈ ಕೆಳಗಿನ ವಾಕ್ಯಗಳಲ್ಲಿ ಕ್ರಿಯಾಪದಗಳನ್ನು ಗುರುತಿಸಿ :—

೧. ಸೂರ್ಯನು ಹುಟ್ಟಿದನು. ೨. ಕಾಗೆಗಳು ಹಾರಿದವು. ೩. ಕೋಳಿ ಕೂಗಿತು. ೪. ಶಾಲೆ ತೆರೆಯಿತು. ೫. ಗಂಟೆ ಹೊಡೆಯಿತು. ೬. ಉಪಾಧ್ಯಾಯರು ಬಂದರು. ೭. ನದಿಗಳು ಹರಿಯುತ್ತವೆ. ೮. ಪಾಠವು ಮುಗಿಯಿತು. ೯. ಮನೆ ಬಿದ್ದಿತು. ೧೦. ಕುದುರೆ ಓಡಿತು.

(೨) ಈ ಕೆಳಗೆ ಗೀಟು ಹಾಕಿರುವ ಭಾಗಗಳಲ್ಲಿರಬೇಕಾದ ಕ್ರಿಯಾಪದಗಳನ್ನು ಸೇರಿಸಿ.*

೧. ಸಿಂಹವು —. ೨. ಹೂಗಳು —. ೩. ಹಕ್ಕಿಗಳು —. ೪. ಅಗಸನು —. ೫. ಕತ್ತೆ —. ೬. ಬಡಗಿ —. ೭. ಗಡಿಯಾರವು —. ೮. ಕುದುರೆ —. ೯. ಪಾಠಶಾಲೆಯು —. ೧೦. ಗುರುಗಳು —.

---

## ಪಾಠ ೪

### ಕರ್ಮಪದ object

ಗುರುಗಳು **ಪಾಠವನ್ನು** ಹೇಳಿದರು. ಗುರುಗಳು ಏನನ್ನು ಹೇಳಿದರು?

ಹುಡುಗರು **ಆಟವನ್ನು** ಆಡುತ್ತಾರೆ. ಹುಡುಗರು ಏನನ್ನು ಮಾಡುತ್ತಾರೆ?

ಹುಲಿ **ರಕ್ತವನ್ನು** ಹೀರಿತು. ಹುಲಿ what ಏನನ್ನು ಹೀರಿತು?

---

* ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :—

ಅರಳುತ್ತವೆ, ಮಗದ ಕೆಲಸ ಮಾಡುತ್ತಾನೆ, ಮುಚ್ಚಿದೆ, ಗರ್ಜಿಸುತ್ತದೆ, ಬಟ್ಟೆ ಒಗೆಯುತ್ತಾನೆ, ಭಾರ ಹೊರುತ್ತದೆ, ಕೆನೆಯುತ್ತದೆ, ಪಾಠ ಹೇಳುತ್ತಾರೆ, ಹಾರುತ್ತವೆ, ನಡೆಯುತ್ತದೆ.

ಸೀತೆಯು ನೀರನ್ನು ಕುಡಿದಳು. ಸೀತೆಯು ಏನನ್ನು ಕುಡಿದಳು? ಕಪಿಲೆ ಕಾವೇರಿಯನ್ನು ಸೇರುತ್ತದೆ. ಕಪಿಲೆ ಯಾವುದನ್ನು ಸೇರುತ್ತದೆ?

ಈ ವಾಕ್ಯಗಳಲ್ಲಿ ಕರ್ತೃಪದ, ಕ್ರಿಯಾಪದಗಳಲ್ಲದೆ ಬೇರೆ ಪದಗಳೂ ಇವೆ. ಕ್ರಿಯಾಪದದ ಮೇಲೆ ಏನನ್ನು? ಯಾವುದನ್ನು? ಎಂಬ ಪ್ರಶ್ನೆ ಹಾಕಿದರೆ ಬರುವ ಉತ್ತರವೇ ಈ ಪದಗಳು. ಇವನ್ನು '**ಕರ್ಮಪದ**' ಎನ್ನುವರು.

§ಕ್ರಿಯಾಪದದ ಮೇಲೆ ಏನನ್ನು? ಯಾವುದನ್ನು? ಎಂದು ಪ್ರಶ್ನೆ ಹಾಕಿದರೆ ಉತ್ತರವಾಗಿ ಬರುವ ಪದಕ್ಕೆ '**ಕರ್ಮಪದ**' ಎಂದು ಹೆಸರು.

ಸಾಮಾನ್ಯವಾಗಿ ಈ ಪದದ ಕೊನೆಯಲ್ಲಿ '**ಅನ್ನು**' ಎಂಬುದು ಸೇರಿರುವುದು.

## ಅಭ್ಯಾಸ

(೧) ಈ ಕೆಳಗಿನ ವಾಕ್ಯಗಳಲ್ಲಿ ಕರ್ಮಪದಗಳು ಯಾವುವು?—

೧. ದೊಡ್ಡವರು ಪರೋಪಕಾರವನ್ನು ಮಾಡುವರು. ೨. ಎಲ್ಲರೂ ಜ್ಞಾನವನ್ನು ಸಂಪಾದಿಸಬೇಕು. ೩. ಸೂರ್ಯನು ಬೆಳಕನ್ನು ಕೊಡುತ್ತಾನೆ. ೪. ಬಳ್ಳಿಗಳು ಮರವನ್ನು ಸುತ್ತಿಕೊಂಡಿವೆ. ೫. ಹುಡುಗನು ಪುಸ್ತಕವನ್ನು ಓದುತ್ತಾನೆ. ೬. ಗೋವಿಂದನು ಅಕ್ಷರಗಳನ್ನು ಕಲಿಯುತ್ತಾನೆ. ೭. ಗಾಡಿ ಮೈಸೂರನ್ನು ಬಿಟ್ಟಿತು. ೮. ಚಿತ್ರಕಾರನು ಪಟವನ್ನು ಬರೆದನು. ೯. ಕಪಿ ಗಿಡವನ್ನು ಹತ್ತಿತು. ೧೦. ರಾಮನು ಬಹುಮಾನವನ್ನು ಪಡೆದನು.

(೨) ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಕಡೆ ಹೊಂದುವ ಪದಗಳನ್ನು ಸೇರಿಸಿ :—*

೧. ರಾಮನು — ಓಡಿಸಿದನು. ೨. ಕುದುರೆ — ಕೆಡವಿತು. ೩. ಕೃಷ್ಣನು — ಬಯ್ದನು. ೪. ಸೀತೆ — ಕುಡಿದಳು. ೫. — ರಾಜನನ್ನು ಕೇಳಿಕೊಂಡರು. ೬. — ಮದ್ದೂರನ್ನು ಸೇರಿತು. ೭. — ಅಳುತ್ತಾನೆ ೮. ಯಜಮಾನನು — ಕರೆದನು. ೯. ಶಿಕ್ಷಕನು ಹುಡುಗನನ್ನು — . ೧೦. ದೇವರು — ಮಾಡಲಿ.

---

* ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :—

ಸವಾರನನ್ನು, ಸೇವಕನನ್ನು, ಒಳ್ಳೆಯದನ್ನು, ರಾಜನು, ರಾಮನನ್ನು, ಗುರುಗಳು, ಹೊಡೆದನು, ಗಾಡಿ, ಹಸುವನ್ನು, ನೀರನ್ನು.

## ಪಾಠ ೫

## ನಾಮಪದ Noun.

ರಾಮನು ಬಂದನು. ಸೀತೆ ಎದ್ದಳು. ಉಪಾಧ್ಯಾಯನು ಪುಸ್ತಕವನ್ನು ತೆರೆದನು. ಹುಡುಗರು ಹಲಗೆಯನ್ನು ಒರೆಸಿದರು. ಆಳು ಪೆಟ್ಟಿಗೆಯನ್ನು ತಂದನು. ರಾಮನು ಕಿಟಕಿಯನ್ನು ತೆರೆದನು.

ಮೇಲಿನ ವಾಕ್ಯಗಳ ಕರ್ತೃ ಕರ್ಮ ಪದಗಳನ್ನು ಬಿಡಿಸಿದೆ :—

| ಕರ್ತೃ | ಕರ್ಮ |
|---|---|
| ಉಪಾಧ್ಯಾಯನು | ಪುಸ್ತಕವನ್ನು |
| ಹುಡುಗರು | ಹಲಗೆಯನ್ನು |
| ಆಳು | ಪೆಟ್ಟಿಗೆಯನ್ನು |
| ರಾಮನು | ಕಿಟಕಿಯನ್ನು |

ಕರ್ತೃಪದ ಮತ್ತು ಕರ್ಮಪದಗಳು ಪ್ರಾಣಿ ಅಥವಾ ವಸ್ತುಗಳ ಹೆಸರುಗಳನ್ನು ಹೇಳತಕ್ಕವು. ಹೆಸರು ಎಂಬುದಕ್ಕೆ ಸಂಸ್ಕೃತದಲ್ಲಿ 'ನಾಮ' ಎಂದು ಹೇಳುತ್ತಾರೆ.

§ ಹೆಸರನ್ನು ಹೇಳುವ ಪದಕ್ಕೆ '**ನಾಮಪದ**' ಎಂದು ಹೆಸರು.

ನಾಮಪದವು ಕರ್ತೃಪದವಾಗಿಯೂ ಇರಬಹುದು ; ಕರ್ಮಪದವಾಗಿಯೂ ಇರಬಹುದು.

### ಅಭ್ಯಾಸ

(೧) ಈ ವಾಕ್ಯಗಳಲ್ಲಿ ನಾಮಪದಗಳಾವುವು? ಅವು ಕರ್ತೃಪದಗಳಾಗಿವೆಯೇ? ಕರ್ಮಪದಗಳಾಗಿವೆಯೇ? :—

೧. ಶ್ಯಾಮನು ಆಡುತ್ತಾನೆ. ೨. ಜಾನಕಿ ಓದುತ್ತಾಳೆ. ೩. ಬೆಕ್ಕು ಇಲಿಯನ್ನು ಹಿಡಿಯಿತು. ೪. ರಾಮನು ಪಾಠವನ್ನು ಓದುತ್ತಾನೆ. ೫. ಗೂಳಿ ಕರುವನ್ನು ಹಾಯಿತು. ೬. ಕವಾಡಿಗನು ಹಾಲನ್ನೂ, ಮೊಸರನ್ನೂ ಮಾರುತ್ತಾನೆ. ೭. ಚಿಪ್ಪಿಗನು ಬಟ್ಟೆಯನ್ನು ಹೊಲಿಯುತ್ತಾನೆ. ೮ ಅಗಸನು ಬಟ್ಟೆಗಳನ್ನು ಒಗೆಯುತ್ತಾನೆ. ೯. ಅಕ್ಕಸಾಲೆ ಒಡವೆಗಳನ್ನು ಮಾಡುತ್ತಾನೆ. ೧೦. ರಾಜನು ದೇಶವನ್ನು ರಕ್ಷಿಸುತ್ತಾನೆ.

(೨) ಈ ವಾಕ್ಯಗಳಲ್ಲಿ ಬಿಟ್ಟಿರುವ ನಾಮಪದಗಳನ್ನು ಸೇರಿಸಿ :—*

೧. ನಾನು — ಕುಡಿಯುತ್ತೇನೆ. ೨. — ಹಲಗೆಯನ್ನು ಒರೆಸಿದನು. ೩. ರಾಮನು — ಹೊಡೆದನು. ೪. ಇಲಿಯನ್ನು — ಕೊಂದಿತು. ೫. ರೈತನು — ಉಳುತ್ತಾನೆ. ೬. — ಪಾಠವನ್ನು ಹೇಳಿದರು. ೭. ಆಳು — ತೆರೆದನು. ೮. ತಾಯಿ — ಕೊಟ್ಟಳು. ೯. ಮಗು — ನಿಲ್ಲಿಸಿತು. ೧೦. ದೇವರು — ಕಾಪಾಡುತ್ತಾನೆ.

---

## ಪಾಠ ೬

### ನಾಮಪದ—ವಸ್ತುವಾಚಕ

| | |
|---|---|
| ರಾಮನ ಪುಸ್ತಕ | ನಾಯಿಯ ಬಾಲ |
| ಮರದ ಬಾಗಿಲು | ಹುಲಿಯ ಮೀಸೆ |
| ಕಬ್ಬಿಣದ ಕಂಬಿ | ಕರಡಿಯ ಉಗುರು |
| ಮೈಸೂರು ದೇಶ | ಬೆಂಗಳೂರ ಅಕ್ಕಿ |
| ಚಾಮುಂಡಿಯ ಬೆಟ್ಟ | ಕೋಲಾರದ ಚಿನ್ನ |
| ಕಾವೇರೀ ನದಿ | ಸೂರ್ಯ, ಚಂದ್ರ |

ಮೇಲೆ ಹೇಳಿದ ಪದಗಳೆಲ್ಲವೂ ಹೆಸರುಗಳನ್ನು ಸೂಚಿಸುವುವು. ಅವುಗಳಲ್ಲಿ ಕೆಲವು ಮನುಷ್ಯರ ಅಥವಾ ಪ್ರಾಣಿಗಳ ಹೆಸರನ್ನೂ, ಕೆಲವು ಪದಾರ್ಥಗಳ ಹೆಸರನ್ನೂ, ಇನ್ನು ಕೆಲವು ಸ್ಥಳಗಳ ಹೆಸರನ್ನೂ ಹೇಳುತ್ತವೆ. ಹೀಗೆ ಒಬ್ಬ ಮನುಷ್ಯನ ಅಥವಾ ಪ್ರಾಣಿಯ ಹೆಸರನ್ನಾಗಲಿ, ಒಂದು ಪದಾರ್ಥದ ಹೆಸರನ್ನಾಗಲಿ, ಒಂದು ಸ್ಥಳದ ಹೆಸರನ್ನಾಗಲಿ ಸೂಚಿಸುವ ಪದವು 'ವಸ್ತುವಾಚಕ.' [ವಸ್ತು—ಪದಾರ್ಥ, ವಾಚಕ—ಹೇಳುವ ಶಬ್ದ.]

§ ಮನುಷ್ಯ, ಪ್ರಾಣಿ, ಸ್ಥಳ, ಪದಾರ್ಥ—ಇವುಗಳ ಹೆಸರನ್ನು ಹೇಳುವ ನಾಮಪದಕ್ಕೆ '**ವಸ್ತುವಾಚಕ**' ಎಂದು ಹೆಸರು.

---

* ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :—

ಮಗುವನ್ನು, ಹಾಲನ್ನು, ಭೂಮಿಯನ್ನು, ಬಾಗಿಲನ್ನು, ಬೆಕ್ಕು, ತಿಂಡಿಯನ್ನು, ಗುರುಗಳು, ಅಳುವನ್ನು, ಸಜ್ಜನರನ್ನು, ಹುಡುಗನು.

## ಅಭ್ಯಾಸ

(೧) ಇಲ್ಲಿ ಬರೆದಿರುವ ವಾಕ್ಯಗಳಲ್ಲಿ ವಸ್ತುವಾಚಕಗಳನ್ನು ಕಂಡುಹಿಡಿಯಿರಿ.—

೧. ಮೈಸೂರನ್ನು ಶ್ರೀ ಕೃಷ್ಣರಾಜ ಒಡೆಯರವರು ಆಳುತ್ತಾರೆ. ೨. ಮೈಸೂರಿನ ಬಳಿ ಚಾಮುಂಡಿ ಬೆಟ್ಟವಿದೆ. ೩. ಕಾವೇರಿ ನದಿಯಿಂದ ನಲ್ಲಿಗಳಲ್ಲಿ ನೀರನ್ನು ತಂದಿದ್ದಾರೆ. ೪. ಶ್ರೀರಾಮನು ಅಯೋಧ್ಯೆಯ ರಾಜನು. ೫. ಭರತ ಲಕ್ಷ್ಮಣ ಶತ್ರುಘ್ನರು ಅವನ ಸಹೋದರರು. ೬. ಹನುಮಂತನು ಸ್ವಾಮಿಭಕ್ತನು. ೭. ಈ ಕೊಠಡಿಗೆ ಕಿಟಿಕಿಯಿಂದ ಬೆಳಕು ಬರುತ್ತದೆ. ೮. ಗೋವಿಂದನು ಪುಸ್ತಕ ವನ್ನು ತರಲಿಲ್ಲ. ೯. ನಾನು ಹಲಗೆಯನ್ನು ಒರೆಸಿದೆನು. ೧೦. ವೇಳಾಪತ್ರಿಕೆಯು ನನ್ನಲ್ಲಿಲ್ಲ.

(೨) ಈ ವಾಕ್ಯಗಳಲ್ಲಿ ಬಿಟ್ಟಿರುವ ಕಡೆ ವಸ್ತುವಾಚಕಗಳನ್ನು ಸೇರಿಸಿ .—*

೧. — ಎತ್ತರವಾದುದು. ೨. — ಸೀತೆಯ ಗಂಡನು. ೩. ಪಾಂಡವರ ಹೆಂಡತಿ —. ೪. ನಮ್ಮ ತಂದೆಯ ಹೆಸರು —. ೫. ನನ್ನ ಹೆಸರು —. ೬. ನನಗೆ ಇಬ್ಬರು — ಇದ್ದಾರೆ. ೭. ಹಸು — ಕೊಡುತ್ತದೆ. ೮. ಮಗು —ಕಚ್ಚಿತು.

---

## ಪಾಠ ೭

### ಲಿಂಗ gender

| | |
|---|---|
| ಅಪ್ಪ ಬಂದನೆ? | ಇಲ್ಲಿ ಹೆಸರನ್ನು ತಿಳಿಸುವ ಪದವಾವುದು? |
| ಕಬ್ಬನ್ನು ತಂದನೆ? | ,, |
| ಈ ಕಬ್ಬು ಸಪ್ಪೆ. | ,, |
| ಅಮ್ಮಾ, ನನಗೆ ಹಸಿವು. | ,, |
| ಶಂಕರ, ಆಡೋಣ ಬಾ. | ,, |
| ಜಾನಕಿ, ನೀನೂ ಬಾ. | ,, |
| ಹಸು ಹಾಲು ಕೊಡುತ್ತದೆ. | ,, |

* ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :—
ದ್ರೌಪದಿ, ಕೃಷ್ಣ, ಹಾಲನ್ನು, ಮಹದಿ, ಅಪ್ಪಾಜಿ, ರಾಮನು, ತಂಗಿಯರು, ಬಟ್ಟೆಯನ್ನು.

ಈ ವಾಕ್ಯಗಳಲ್ಲಿರುವ ನಾಮಪದಗಳಲ್ಲಿ ಅಪ್ಪ, ಶಂಕರ — ಎಂಬ ಪದಗಳು ಗಂಡಸರ ಹೆಸರುಗಳನ್ನು ಸೂಚಿಸುತ್ತವೆ. ಅಮ್ಮ, ಜಾನಕಿ— ಇವು ಹೆಂಗಸರನ್ನು ಹೇಳುತ್ತವೆ. ಉಳಿದವು ಗಂಡಸರೂ ಹೆಂಗಸರೂ ಅಲ್ಲದ ಪದಾರ್ಥಗಳನ್ನು ತಿಳಿಸುತ್ತವೆ.

§ ಗಂಡಸರ **ಹೆಸರನ್ನು** ಸೂಚಿಸುವ ಶಬ್ದಗಳನ್ನು 'ಪುಲ್ಲಿಂಗ ಶಬ್ದಗಳು' ಎಂದೂ, ಹೆಂಗಸರ **ಹೆಸರನ್ನು** ಸೂಚಿಸುವ ಶಬ್ದಗಳನ್ನು 'ಸ್ತ್ರೀಲಿಂಗ ಶಬ್ದಗಳು' ಎಂದೂ, ಇವೆರಡೂ ಅಲ್ಲದ ವಸ್ತುವಾಚಕಗಳನ್ನು 'ನಪುಂಸಕಲಿಂಗ ಶಬ್ದಗಳು' ಎಂದೂ ಕರೆಯುತ್ತಾರೆ.

ಹೀಗೆ ನಾಮಪದವು ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ — ಈ ಮೂರರಲ್ಲಿ ಯಾವುದಕ್ಕಾದರೂ ಸೇರಿರುತ್ತದೆ.

## ಅಭ್ಯಾಸ

(೧) ಈ ವಾಕ್ಯಗಳಲ್ಲಿರುವ ನಾಮಪದಗಳು ಯಾವ ಲಿಂಗಕ್ಕೆ ಸೇರಿದುವೆಂಬುದನ್ನು ತಿಳಿಸಿ.—

೧. ಈಗ ಲಕ್ಷ್ಮಿ ಕೋಳಿ. ೨. ಅಮ್ಮ, ಅನ್ನ ಹಾಕು. ೩. ಅಪ್ಪ! ರೊಟ್ಟಿ ಕೊಡು. ೪. ಸೀತೆ ರಾಜನನ್ನು ಒಡೆವಳು. ೫. ಕುದುರೆಯನ್ನು ಕಟ್ಟಿಹಾಕು. ೬. ಹಸುವಿಗೆ ಹುಲ್ಲು ಹಾಕು. ೭. ರುಕ್ಮಿಣಿ! ಆಟಕ್ಕೆ ಬಾ. ೮. ಮರವನ್ನು ಕಡಿಯಬೇಡ. ೯. ಗಿಳಿ ಚೆನ್ನೋ! ಕಾಗೆ ಚೆನ್ನೋ? ೧೦. ಅಕ್ಕಾ, ಭಾವ ಬಂದನು ಮಿಠಾಯಿ ತಂದನು.

(೨) ಇಲ್ಲಿ ಗೀಟಿರುವ ಕಡೆ ಸರಿಯಾದ ನಾಮಪದಗಳನ್ನು ಸೇರಿಸಿ, ಅವು ಯಾವ ಲಿಂಗಕ್ಕೆ ಸೇರಿದುವೆಂಬುದನ್ನು ಹೇಳಿ.—*

೧. — ಹಸುರಾಗಿದೆ. ೨. — ಮರದಲ್ಲಿ ಕೆಲಸ ಮಾಡುತ್ತಾನೆ. ೩. — ಬಟ್ಟೆಗಳನ್ನು ಹೊಲಿಯುತ್ತಾನೆ. ೪. — ಅಡಿಗೆ ಮಾಡುತ್ತಾಳೆ. ೫. — ಹಾಲು ಕೊಡುತ್ತದೆ. ೬. — ಹಣ್ಣು ಬಿಡುತ್ತದೆ. ೭. — ಪಾಠ ಹೇಳುತ್ತಾನೆ. ೮. — ಓದುತ್ತಾಳೆ. ೯. — ಮಲಗುತ್ತಾನೆ. ೧೦. — ಅಳುತ್ತದೆ.

---

*ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :

ಹುಡುಗಿ, ಚಿಪ್ಪಿಗನು, ಗದ್ದೆ, ಹಸು, ಬಡಗಿ, ಮರವು, ತಾಯಿ, ಮಗು, ಗುರು, ಹುಡುಗನು.

## ಪಾಠ ೮

### ವಚನ Number

| | |
|---|---|
| ಮರವು ಬಿದ್ದಿತು. | ಮರಗಳು ಬಿದ್ದವು. |
| ಪಠವು ಹಾರಿತು. | ಪಠಗಳು ಹಾರಿದವು. |
| ಕೈಯನ್ನು ಎತ್ತು. | ಕೈಗಳನ್ನು ಎತ್ತು. |
| ಪುಸ್ತಕ ಬೇಕು. | ಪುಸ್ತಕಗಳು ಬೇಕು. |

ಮೊದಲನೆಯ ಸಾಲಿನ ಪದಗಳು ಒಂದೇ ವಸ್ತುವನ್ನೂ, ಎರಡನೆಯ ಸಾಲಿನ ಪದಗಳು ಅನೇಕ ವಸ್ತುಗಳನ್ನೂ ಸೂಚಿಸುತ್ತವೆ. ಒಂದು ಎಂಬುದಕ್ಕೆ 'ಏಕ' ಎಂದೂ, ಅನೇಕ ಎಂಬುದಕ್ಕೆ 'ಬಹು' ಎಂದೂ ಹೇಳುತ್ತಾರೆ. ಆದ್ದರಿಂದ ಒಂದು ವಸ್ತುವನ್ನು ಹೇಳುವ ನಾಮಪದವು 'ಏಕವಚನದಲ್ಲಿದೆ' ಎಂದೂ, ಅನೇಕ ವಸ್ತುಗಳನ್ನು ಹೇಳುವ ನಾಮಪದವು 'ಬಹುವಚನದಲ್ಲಿದೆ' ಎಂದೂ ಹೇಳುತ್ತೇವೆ.

§ ಒಂದು ವಸ್ತುವನ್ನು ಮಾತ್ರ ಸೂಚಿಸುವ ಪದಕ್ಕೆ '**ಏಕ ವಚನ**' ಎಂದೂ, ಅನೇಕ ವಸ್ತುಗಳನ್ನು ಸೂಚಿಸುವುದಕ್ಕೆ '**ಬಹು ವಚನ**' ಎಂದೂ ಹೆಸರು.

### ಅಭ್ಯಾಸ

ಈ ಕೆಳಗಿನ ವಾಕ್ಯಗಳಲ್ಲಿ ನಾಮಪದವು ಯಾವ ವಚನದಲ್ಲಿದೆ?—

೧. ಹಸುಗಳು ಹಾಲನ್ನು ಕೊಡುತ್ತವೆ. ೨. ಹಲ್ಲು ಬೆಳ್ಳಗಿದೆ. ೩. ಕುರ್ಚಿಗೆ ನಾಲ್ಕು ಕಾಲುಗಳಿವೆ. ೪. ಈ ಬಾಗಿಲಿಗೆ ಎರಡು ಕದಗಳಿವೆ. ೫. ನಮ್ಮ ತರಗತಿಯಲ್ಲಿರುವ ಹಲಗೆಗಳೆಷ್ಟು? ೬. ಒಂದು ಹಲಗೆ, ಒಂದು ಮೇಜು, ಒಂದು ಕುರ್ಚಿ — ಇವು ಮೂರು ಇಲ್ಲಿವೆ. ೭. ಈ ಕೊಠಡಿಗೆ ಬಾಗಿಲುಗಳೆಷ್ಟು? ಕಿಟಿಕಿಗಳೆಷ್ಟು?

(೨) ಈ ಮಾತುಗಳ ವಚನವನ್ನು ಬದಲಾಯಿಸಿ.—

| | |
|---|---|
| ಜಿಂಕೆಗಳು | ಗಿಡ |
| ಕಾಯಿಗಳು | ಮರ |
| ಎಲೆಗಳು | ನರಿ |
| ಗೂಳಿಗಳು | ಗುಡ್ಡ |
| ಆಳುಗಳು | ನದಿ |

## ಪಾಠ ೯

### ಬಹುವಚನ ಪ್ರತ್ಯಯಗಳು Plural Suffixes

| ೧ | ೨ | ೧ | ೨ |
|---|---|---|---|
| ಮರ — | ಮರಗಳು | ಕುರಿ — | ಕುರಿಗಳು |
| ಬೆಟ್ಟ — | ಬೆಟ್ಟಗಳು | ಗುಡಿ — | ಗುಡಿಗಳು |
| ನದಿ — | ನದಿಗಳು | ಕರು — | ಕರುಗಳು |
| ಹಸು — | ಹಸುಗಳು | ಮನೆ — | ಮನೆಗಳು |

ಒಂದನೆಯ ಗುಂಪಿನ ಪದಗಳು ಏಕವಚನದಲ್ಲಿಯೂ, ಎರಡನೆಯ ಗುಂಪಿನ ಪದಗಳು ಬಹುವಚನದಲ್ಲಿಯೂ ಇವೆ. ಈ ಪದಗಳು ನಪುಂಸಕಲಿಂಗ ಶಬ್ದಗಳು. ನಪುಂಸಕಲಿಂಗ ಶಬ್ದಗಳ ಕೊನೆಗೆ ಬಹುವಚನದಲ್ಲಿ ಸಾಮಾನ್ಯವಾಗಿ 'ಗಳು' ಎಂಬುದು ಸೇರುತ್ತದೆ.

| ೧ | ೨ |
|---|---|
| ಅರಸ — ಅರಸರು | ಗಂಡ — ಗಂಡಂದಿರು |
| ರಾಜ — ರಾಜರು | ಅಕ್ಕ — ಅಕ್ಕಂದಿರು |
| ಸ್ತ್ರೀ — ಸ್ತ್ರೀಯರು | ತಮ್ಮ — ತಮ್ಮಂದಿರು |
| ತಂಗಿ — ತಂಗಿಯರು | ಮಾವ — ಮಾವಂದಿರು |

ಪುಲ್ಲಿಂಗ, ಸ್ತ್ರೀಲಿಂಗ ಶಬ್ದಗಳ ಕೊನೆಗೆ ಬಹುವಚನದಲ್ಲಿ ಸಾಮಾನ್ಯವಾಗಿ 'ಅರು' 'ಅಂದಿರು' ಎಂಬುವು ಸೇರಿರುತ್ತವೆ.

ಈ 'ಗಳು', 'ಅರು', 'ಅಂದಿರು' ಎಂಬುದಕ್ಕೆ 'ಬಹುವಚನ ಪ್ರತ್ಯಯಗಳು' ಎಂದು ಹೆಸರು.

### ಅಭ್ಯಾಸ

(೧) ಇಲ್ಲಿ ಕೊಟ್ಟಿರುವ ಪದಗಳಿಗೆ ಬಹುವಚನದಲ್ಲಿ ಯಾವ ಪ್ರತ್ಯಯವನ್ನು ಸೇರಿಸಿದೆ ?—

| | | |
|---|---|---|
| ಗಿಡಗಳು | ಅಣ್ಣಂದಿರು | ಮಾವಂದಿರು |
| ಹಿರಿಯರು | ಗುರುಗಳು | ಗಂಡಸರು |
| ಕುರಿಗಳು | ತಮ್ಮಂದಿರು | |

(೨) ಇವುಗಳನ್ನು ಬಹುವಚನದಲ್ಲಿ ಬರೆಯಿರಿ.—

| | | | |
|---|---|---|---|
| ಪಟ | ರಥ | ಅಣ್ಣ | ಭಾವ |
| ಮರ | ಅತ್ತೆ | ಮಾವ | ರಾಯ |
| ಹಗ್ಗ | ಸೊಸೆ | ಹಚ್ಚಡ | ಕಡ್ಡಿ |

---

## ಪಾಠ ೧೦

### ವಿಭಕ್ತಿ case

### ಪ್ರಥಮಾವಿಭಕ್ತಿ, ದ್ವಿತೀಯಾವಿಭಕ್ತಿ

ರಾಮನು ಬಂದನು. ಇಲ್ಲಿ ನಾಮಪದವಾವುದು ?
ಮರವು ಬಿದ್ದಿತು. ,,
ಗಿಡವು ಹರಡಿತು. ,,
ರಾಮನು ಹಣ್ಣನ್ನು ತಿಂದನು. ,,
ಸೀತೆ ಗಿಡವನ್ನು ಮುರಿದಳು. ,,

ನಾಮಪದಗಳ ಕೊನೆಯಲ್ಲಿ 'ಉ', 'ಅನ್ನು' ಮುಂತಾದ ಕೆಲವು ಪ್ರತ್ಯಯಗಳು ಸೇರುತ್ತವೆ. ಆಗ ಅರ್ಥ ಹೆಚ್ಚುಕಡಿಮೆಯಾಗುತ್ತದೆ. 'ಉ', 'ಅನ್ನು' ಮೊದಲಾದುವುಗಳೇ 'ವಿಭಕ್ತಿ ಪ್ರತ್ಯಯ'ಗಳು.

§ ವಾಕ್ಯದಲ್ಲಿರುವ ಇತರ ಪದಗಳೊಡನೆ ಸಂಬಂಧವನ್ನು ಸೂಚಿಸುವುದಕ್ಕೆ ನಾಮಪದಗಳ ಕೊನೆಯಲ್ಲಿ ಸೇರುವ ಪ್ರತ್ಯಯಗಳಿಗೆ 'ವಿಭಕ್ತಿ ಪ್ರತ್ಯಯಗಳು' ಎಂದು ಹೆಸರು.

ಕರ್ತೃಪದದ ಕೊನೆಯಲ್ಲಿ ಸಾಮಾನ್ಯವಾಗಿ ಸೇರುವ 'ಉ' ಎಂಬುದಕ್ಕೆ '**ಪ್ರಥಮಾವಿಭಕ್ತಿ ಪ್ರತ್ಯಯ**' ಎಂದು ಹೆಸರು.

ಕರ್ಮಪದದ ಕೊನೆಯಲ್ಲಿ 'ಅನ್ನು' ಎಂಬುದು ಸೇರುವುದು. ಇದಕ್ಕೆ '**ದ್ವಿತೀಯಾವಿಭಕ್ತಿ ಪ್ರತ್ಯಯ**' ಎಂದು ಹೆಸರು.

### ಅಭ್ಯಾಸ

(೧) ಈ ಕೆಳಗಿನ ವಾಕ್ಯಗಳಲ್ಲಿ ನಾಮಪದಗಳಿಗೆ ಯಾವ ವಿಭಕ್ತಿ ಪ್ರತ್ಯಯಗಳು ಸೇರಿವೆ ?—

೧. ಕೋತಿ ಆ ಮರವನ್ನು ಹತ್ತಿತು. ೨. ತೆಂಗಿನಕಾಯನ್ನು ಕೆಡವಿತು. ೩. ಕೊಂಬೆಯನ್ನು ಮುರಿಯಿತು. ೪. ತಾಯಿಯು ಹಾಲನ್ನು ಕೊಟ್ಟಳು. ೫. ಹುಡುಗರು ಕಲ್ಲನ್ನು ಎಸೆದರು. ೬. ಕಪ್ಪೆಗಳು ಸತ್ತುಹೋದುವು. ೭. ಬಾಯನ್ನು ಮುಚ್ಚಿಕೋ. ೮. ಸೂಜಿಯು ಮುರಿಯಿತು. ೯. ನಮ್ಮನ್ನು ಹೊಡೆಯಬೇಡಿರಿ. ೧೦. ಮೂಕಜಂತುಗಳು ಮಾತಾಡಲಾರವು.

(೨) ಈ ಕೆಳಗೆ ಗೀಟಿರುವ ಕಡೆ ಪದಗಳನ್ನು ಸೇರಿಸಿ, ಅವು ಯಾವ ವಿಭಕ್ತಿಗಳಲ್ಲಿವೆಯೆಂಬುದನ್ನು ತಿಳಿಸಿ.—*

೧. ಅವನು — ಹೊಡೆದನು. ೨. ಕರು — ತುಳಿಯಿತು. ೩. ರಾಮನು — ಹರಿದನು. ೪. — ಹಾಲನ್ನು ಕೊಡುತ್ತದೆ. ೫. ಹುಡುಗನು — ಮಾಡುತ್ತಾನೆ. ೬. ಹಸು ಮೇಯುತ್ತದೆ. ೭ —ಹುಟ್ಟಿದಾಗ ಸಾಯಂಕಾಲ. ೮. — ಪೂರ್ವದಿಕ್ಕಿನಲ್ಲಿ ಹುಟ್ಟುತ್ತಾನೆ. ೯. ಕಲ್ಲು, ಮಣ್ಣು, ಇಟ್ಟಿಗೆಗಳಿಂದ — ಕಟ್ಟುತ್ತಾರೆ. ೧೦. — ಅಲ್ಲಿಂದ ಹರಿಯಿತು.

---

## ಪಾಠ ೧೧

### ತೃತೀಯಾವಿಭಕ್ತಿ Instrumental case

ತಾಮ್ರದಿಂದ ತಪ್ಪಲೆಯನ್ನು ಮಾಡುತ್ತಾರೆ.
ಹಣ್ಣನ್ನು ಚೂರಿಯಿಂದ ಕೊಯ್ಯಬಹುದು.
ಕಬ್ಬಿನಿಂದ ಸಕ್ಕರೆಯಾಗುತ್ತದೆ.
ಅವನು ರೋಗದಿಂದ ನರಳುತ್ತಾನೆ.
ಸಂತೆಯಿಂದ ಜನರಿಗೆ ಉಪಯೋಗವುಂಟು.

ತಾಮ್ರದಿಂದ, ಚೂರಿಯಿಂದ, ಕಬ್ಬಿನಿಂದ, ರೋಗದಿಂದ, ಸಂತೆಯಿಂದ—ಈ ಪದಗಳ ಕೊನೆಯಲ್ಲಿ ‘ಇಂದ’ ಎಂಬುದು ಸೇರಿದೆ.

---

*ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ.—

ಕಾಲನ್ನು, ನೀರು, ಸೂರ್ಯನು, ಹುಲ್ಲನ್ನು, ಹಸು, ಬಟ್ಟೆಯನ್ನು, ಮಗುವನ್ನು, ಚೇಷ್ಟೆ, ಚಂದ್ರನು, ಮನೆಯನ್ನು.

ಹೀಗೆ ನಾಮಪದದ ಕೊನೆಯಲ್ಲಿ ‘ಇಂದ’ ಎಂಬುದು ಸೇರಿದ್ದರೆ, ಅದನ್ನು ‘ ತೃತೀಯಾವಿಭಕ್ತಿ ’ ಯಲ್ಲಿದೆ ಎನ್ನುವರು.

§ ನಾಮಪದದ ಕೊನೆಯಲ್ಲಿ ‘ಇಂದ’ ಎಂಬ ಪ್ರತ್ಯಯವು ಸೇರಿದ್ದರೆ, ಅದು ತೃತೀಯಾವಿಭಕ್ತಿಯಾಗುವುದು.

### ಅಭ್ಯಾಸ

(೧) ಈ ವಾಕ್ಯಗಳಲ್ಲಿರುವ ನಾಮಪದಗಳು ಯಾವ ವಿಭಕ್ತಿಯಲ್ಲಿವೆ?

೧. ಆಳು ಸೌದೆಯನ್ನು ಗರಗಸದಿಂದ ಕೊಯ್ದನು. ೨. ಹುಲಿಯು ಹಸುವನ್ನು ಪಂಜದಿಂದ ಹೊಡೆಯಿತು. ೩. ಮಗು ತೊಟ್ಟಿಲಿನಿಂದ ಕೆಳಕ್ಕೆ ಬಿದ್ದಿತು. ೪. ತಾಮ್ರದಿಂದ ತಂತಿಗಳನ್ನು ಮಾಡುತ್ತಾರೆ. ೫. ಗಂಧದ ಮರದಿಂದ ಎಣ್ಣೆಯನ್ನು ತೆಗೆಯುತ್ತಾರೆ. ೬. ಕೆಟ್ಟ ಸಹವಾಸದಿಂದ ಕೇಡು ಬರುವುದು. ೭. ಹತ್ತಿಯಿಂದ ಬಟ್ಟೆಯನ್ನು ನೇಯುವರು.

(೨) ಇಲ್ಲಿ ಬಿಟ್ಟಿರುವ ಭಾಗಗಳನ್ನು ಸೇರಿಸಿ ಬರೆಯಿರಿ.—*

೧. ಆಕಾಶವು — ತುಂಬಿದೆ. ೨. — ನೀರಿನ ಹನಿಗಳು ಬೀಳುತ್ತವೆ. ೩. ನಾವು — ರುಚಿ ನೋಡುತ್ತೇವೆ. ೪. ಶತ್ರುಗಳು — ಓಡಿದರು. ೫. ಮಗು — ಕುಣಿಯಿತು. ೬. ವರ್ತಕನು — ಊರಿಗೆ ಬಂದನು.

---

### ಪಾಠ ೧೨

#### ಚತುರ್ಥೀವಿಭಕ್ತಿ Dative case

ಕೃಷ್ಣನು ಹಳ್ಳಿಗೆ ಹೋದನು. ರಾಮನಿಗೆ ನೀರನ್ನು ಕೊಡು.
ಹೂವಿಗೆ ದುಡ್ಡನ್ನು ಕೊಡು. ದೇವರಿಗೆ ನಮಸ್ಕಾರಮಾಡು.

ಮೇಲೆ ಬರೆದಿರುವ ಹಳ್ಳಿಗೆ, ರಾಮನಿಗೆ, ಹೂವಿಗೆ, ದೇವರಿಗೆ ಎಂಬ ಪದಗಳ ಅಂತ್ಯದಲ್ಲಿ ‘ಗೆ’ ಎಂಬುದು ಬಂದಿದೆ. ಇದಕ್ಕೆ ‘ ಚತುರ್ಥೀವಿಭಕ್ತಿ ’ ಪ್ರತ್ಯಯ ಎಂದು ಹೆಸರು.

---

*ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ.—
ತನ್ನ, ಮೋಡಗಳಿಂದ, ಹಣ್ಣನ್ನು, ಸಂತೋಷದಿಂದ, ಊರಿಂದ, ಆಕಾಶದಿಂದ.

೧. ಮರಕ್ಕೆ ನೀರು ಹಾಕು. ೨. ಹಸು ಸಿಂಹಕ್ಕೆ ಹೆದರುತ್ತದೆ. ೩. ದಾರಿದ್ರ್ಯಕ್ಕೆ ದೊಡ್ಡ ಹೊಟ್ಟೆ. ೪. ಲೋಕಕ್ಕೆ ದೇವರು ದೊಡ್ಡವನು.

ಮರಕ್ಕೆ, ಸಿಂಹಕ್ಕೆ, ದಾರಿದ್ರ್ಯಕ್ಕೆ, ಲೋಕಕ್ಕೆ — ಈ ಪದಗಳ ಕೊನೆಯಲ್ಲಿ 'ಕ್ಕೆ' ಎಂಬುದು ಬಂದಿದೆ. ಇದನ್ನೂ ಚತುರ್ಥೀವಿಭಕ್ತಿಯ ಪ್ರತ್ಯಯ ಎಂದು ಕರೆಯುವರು.

§ ನಾಮಪದದ ಕೊನೆಯಲ್ಲಿ 'ಗೆ', 'ಕೆ' ಎಂಬುವು ಸೇರಿದಾಗ ಅದು ಚತುರ್ಥೀವಿಭಕ್ತಿಯಲ್ಲಿರುವುದು.

## ಅಭ್ಯಾಸ

(೧) ಈ ಕೆಳಗಿನ ವಾಕ್ಯಗಳಲ್ಲಿ ನಾಮಪದಗಳು ಯಾವ ವಿಭಕ್ತಿಯಲ್ಲಿವೆ ?—

೧. ಮಜ್ಜಿಗೆಗೆ ಉಪ್ಪನ್ನು ಹಾಕು. ೨. ನನಗೆ ತುಪ್ಪವು ಬೇಕು. ೩. ದೇವರು ಭಕ್ತರಿಗೆ ವರವನ್ನು ಕೊಡುವನು. ೪. ಅವನಿಗೆ ಇವನು ಸಮಾನನು. ೫. ತುಪ್ಪಕ್ಕೆ ಎಣ್ಣೆಯು ಸಾಟಿಯೇ ? ೬. ರೋಗಿಗೆ ಔಷಧವನ್ನು ಕೊಡು.

(೨) ಈ ಕೆಳಗಿನ ವಾಕ್ಯಗಳಲ್ಲಿ ಗೀಟಿರುವ ಕಡೆ ಸರಿಯಾದ ಪದಗಳನ್ನು ಸೇರಿಸಿ :—*

೧. — ಸಾಕುವವರ ಮೇಲೆ ಪ್ರೀತಿ. ೨. ರಾಮನು — ಹೋಗುತ್ತಾನೆ. ೩. ರಾಮಲಕ್ಷ್ಮಣರು — ಹೊರಟರು. ೪. — ತುಂಬಾ ದುಃಖವಾಯಿತು. ೫. — ಬೆಂಕಿ ಬಿದ್ದಿತು. ೬. — ನೀರು ಹಾಕು. ೭. — ದೇವರು ದೊಡ್ಡವನು. ೮. — ಹುಲ್ಲು ಹಾಕು.

---

## ಪಾಠ ೧೩

### ಷಷ್ಠೀವಿಭಕ್ತಿ, ಸಪ್ತಮೀವಿಭಕ್ತಿ

| | |
|---|---|
| ರಾಮನ ಪುಸ್ತಕ. | ಮರದ ಹಲಗೆ. |
| ನಾಯಿಯ ಬಾಲ. | ಹುಡುಗನ ಚೀಲ. |
| ಕುರಿಯ ಮರಿ. | ಗೌಡನ ಹೊಲ. |

* ಮೇಲೆ ಗೀಟುಗಳ ಸ್ಥಳದಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :

ಕಾಡಿಗೆ, ನನಗೆ, ಲಂಕೆಗೆ, ಮನೆಗೆ, ನಾಯಿಗೆ, ಹಸುವಿಗೆ, ಗಿಡಕ್ಕೆ, ಎಲ್ಲರಿಗಿಂತಲೂ.

ಗೀಟು ಹಾಕಿರುವ ನಾಮಪದಗಳ ಕೊನೆಯಲ್ಲಿ 'ಅ' ಪ್ರತ್ಯಯವು ಸೇರಿದೆ. ಇದು ಸೇರಿದರೆ '**ಷಷ್ಠೀವಿಭಕ್ತಿ**'ಯು ರೂಪವಾಗುತ್ತದೆ.

| | |
|---|---|
| **ಎಳ್ಳಿನಲ್ಲಿ** ಎಣ್ಣೆಯಿದೆ. | **ಹಾಲಿನಲ್ಲಿ** ಬೆಣ್ಣೆಯಿದೆ. |
| **ಪೆಟ್ಟಿಗೆಯಲ್ಲಿ** ಹಣವಿದೆ. | **ಹೊಲದಲ್ಲಿ** ಕಳೆ ಬೆಳೆದಿದೆ. |
| **ಮರದಲ್ಲಿ** ಹಣ್ಣನ್ನು ನೋಡು. | **ಚೀಲದಲ್ಲಿ** ಬಳಪವು ಇದೆ. |

ಎಳ್ಳಿನಲ್ಲಿ, ಹಾಲಿನಲ್ಲಿ—ಮೊದಲಾದ ನಾಮಪದಗಳಲ್ಲಿ 'ಅಲ್ಲಿ' ಎಂಬ ಪ್ರತ್ಯಯವು ಸೇರಿದೆ. ಹೀಗೆ ನಾಮಪದಗಳ ಕೊನೆಯಲ್ಲಿ 'ಅಲ್ಲಿ' ಎಂಬುದು ಸೇರಲು '**ಸಪ್ತಮೀವಿಭಕ್ತಿ**'ಯಾಗುವುದು.

| | |
|---|---|
| ಮರವು ಉರುಳಿತು. | ಮರಗಳು ಉರುಳಿದುವು. |
| ಹುಡುಗಿಯನ್ನು ಕರೆ. | ಹುಡುಗಿಯರನ್ನು ಕರೆ. |
| ರಾಜನಿಂದ ಉಪಕಾರವುಂಟು | ರಾಜರಿಂದ ಉಪಕಾರವುಂಟು. |
| ಅಣ್ಣನಿಗೆ ದೇವರಲ್ಲಿ ಭಕ್ತಿಯಿದೆ. | ಅಣ್ಣಂದಿರಿಗೆ ದೇವರಲ್ಲಿ ಭಕ್ತಿಯಿದೆ. |
| ಮರದಲ್ಲಿ ಹಣ್ಣಿದೆ. | ಮರಗಳಲ್ಲಿ ಹಣ್ಣಿವೆ. |

ಮೇಲೆ ಬರೆದಿರುವ ಉದಾಹರಣೆಗಳಲ್ಲಿ ತೋರಿಸಿರುವಂತೆ ಬಹುವಚನದಲ್ಲಿ ನಾಮಪದಗಳಿಗೆ ಬಹುವಚನ ಪ್ರತ್ಯಯವು ಹತ್ತಿದಮೇಲೆ ವಿಭಕ್ತಿಪ್ರತ್ಯಯವು ಹತ್ತುತ್ತದೆ.

## ಅಭ್ಯಾಸ

(೧) ಈ ನಾಮಪದಗಳ ವಿಭಕ್ತಿಗಳನ್ನು ಬರೆಯಿರಿ:—

೧. ಮರವು ಇದೆ. ೨. ಬೆಕ್ಕನ್ನು ನೋಡು. ೩. ಹೂಜಿಗೆ ನೀರು ಹಾಕು. ೪. ಬಟ್ಟೆಯಿಂದ ಬೊಂಬೆಯನ್ನು ಮಾಡು. ೫. ಹಕ್ಕಿಗೆ ಕಾಳು ಹಾಕು. ೬. ಮರಿಗೆ ರೆಕ್ಕೆಯಲ್ಲಿ ಬಲವಿಲ್ಲ. ೭. ಗಿಳಿಯ ಕತ್ತಿನಲ್ಲಿ ಗೆರೆಯಿದೆ. ೮. ಅದರ ಕೊಕ್ಕು ಕೆಂಪು. ೯. ಕಾಗೆಗೆ ಒಂದೇ ಕಣ್ಣಿನಲ್ಲಿ ಗುಡ್ಡೆಯಿದೆ.

(೨) ಗೀಟು ಹಾಕಿರುವ ಕಡೆ ನಾಮಪದಗಳನ್ನು ಸೇರಿಸಿ :—

೧. — ವಿಧೇಯನಾಗಿರು. ೨. — ತಂದೆಯಂತೆ ಭಾವಿಸು. ೩. — ಮರ್ಯಾದೆಯಿಂದ ನೋಡು. ೪. — ಶುಚಿಯಾಗಿಡು. ೫. — ನಂಬು. ೬. — ಯಾವಾಗಲೂ ಭಕ್ತಿಯಿಡು. ೭. — ದೇವರು ಇದ್ದಾನೆ.

---

## ಪಾಠ ೧೪

### ಗುಣವಾಚಕ

| | | | |
|---|---|---|---|
| I | ಕರಿಯ ಮನುಷ್ಯ. | ಎಂಥ ಮನುಷ್ಯ ? | **ಕರಿಯ ಮನುಷ್ಯ** |
| | ದೊಡ್ಡ ಆಳು. | ಎಂಥ ಆಳು ? | **ದೊಡ್ಡ ಆಳು.** |
| | ಪುಟ್ಟ ಹುಡುಗ. | ಎಂಥ ಹುಡುಗ? | **ಪುಟ್ಟ ಹುಡುಗ.** |
| | ಹೊಸ ಜವಾನ. | ಎಂಥ ಜವಾನ | **ಹೊಸ ಜವಾನ.** |
| II | ಕರಿಯ ಹೆಂಗಸು. | ಎಂಥ ಹೆಂಗಸು? | **ಕರಿಯ ಹೆಂಗಸು.** |
| | ದೊಡ್ಡ ಅತ್ತೆ. | ಎಂಥ ಅತ್ತೆ ? | **ದೊಡ್ಡ ಅತ್ತೆ.** |
| | ಪುಟ್ಟ ತಂಗಿ. | ಎಂಥ ತಂಗಿ ? | **ಪುಟ್ಟ ತಂಗಿ.** |
| | ಹೊಸ ಹುಡುಗಿ. | ಎಂಥ ಹುಡುಗಿ ? | **ಹೊಸ ಹುಡುಗಿ.** |
| III | ಕರಿಯ ಹಸು. | ಎಂಥ ಹಸು ? | **ಕರಿಯ ಹಸು.** |
| | ದೊಡ್ಡ ಆನೆ. | ಎಂಥ ಆನೆ ? | **ದೊಡ್ಡ ಆನೆ.** |
| | ಪುಟ್ಟ ಕುರ್ಚಿ. | ಎಂಥ ಕುರ್ಚಿ ? | **ಪುಟ್ಟ ಕುರ್ಚಿ.** |
| | ಹೊಸ ಪುಸ್ತಕ. | ಎಂಥ ಪುಸ್ತಕ ? | **ಹೊಸ ಪುಸ್ತಕ.** |

**ಮೊದಲನೆಯ ಗುಂಪು** — ಇಲ್ಲಿ ಕರಿಯ, ದೊಡ್ಡ, ಪುಟ್ಟ, ಹೊಸ—ಈ ಪದಗಳು ತಮ್ಮ ಮುಂದೆ ಬಂದಿರುವ ಮನುಷ್ಯ, ಆಳು, ಹುಡುಗ, ಜವಾನ ಎಂಬ ಜನರ ಗುಣವನ್ನು ತಿಳಿಸುತ್ತವೆ.

---

* ಮೇಲೆ ಗೀಟುಗಳ ಸ್ಥಳದಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ :—

ಮ್ಮೆಯನ್ನು, ಎಲ್ಲೆಲ್ಲಿಯೂ, ತಂಪೆಗೆ, ಎಲ್ಲರನ್ನೂ, ಗುರುವನ್ನು, ದೇವರನ್ನು, ಗುರುಗಳಲ್ಲ.

**ಎರಡನೆಯ ಗುಂಪು**—ಇಲ್ಲಿ ಕರಿಯ, ದೊಡ್ಡ, ಪುಟ್ಟ, ಹೊಸ—ಈ ಪದಗಳು ತಮ್ಮ ಮುಂದೆ ಬಂದಿರುವ ಹೆಂಗಸು, ಅತ್ತೆ, ತಂಗಿ, ಹುಡುಗಿ ಎಂಬ ಜನರ ಗುಣವನ್ನು ಹೇಳುತ್ತವೆ.

**ಮೂರನೆಯ ಗುಂಪು**—ಇಲ್ಲಿ ಕರಿಯ, ದೊಡ್ಡ, ಪುಟ್ಟ, ಹೊಸ—ಎಂಬ ಪದಗಳು ತಮ್ಮ ಮುಂದೆ ಬಂದಿರುವ ಹಸು, ಆನೆ, ಕುರ್ಚಿ, ಪುಸ್ತಕ ಎಂಬ ಪದಾರ್ಥಗಳ ಗುಣವನ್ನು ಹೇಳುತ್ತವೆ.

ಹೀಗೆ ಗುಣವನ್ನು ತಿಳಿಸುವ ನಾಮಪದಕ್ಕೆ 'ಗುಣವಾಚಕ' ಎಂದು ಹೆಸರು.

ಮನುಷ್ಯ ಕರಿಯವನು. ಮನುಷ್ಯ ಎಂಥವನು? ಕರಿಯವನು.
ಆಳು ದೊಡ್ಡವನು ಆಳು ಎಂಥವನು? ಆಳು ದೊಡ್ಡವನು.
ಹುಡುಗ ಪುಟ್ಟವನು. ಹುಡುಗ ಎಂಥವನು? ಹುಡುಗ ಪುಟ್ಟವನು.
ಜವಾನ ಹೊಸಬ. ಜವಾನ ಎಂಥವನು? ಜವಾನ ಹೊಸಬ.

ಇಲ್ಲಿ ಕರಿಯವನು, ದೊಡ್ಡವನು, ಪುಟ್ಟವನು, ಹೊಸಬ — ಈ ಪದಗಳು ತಮ್ಮ ಹಿಂದಿರುವ ಮನುಷ್ಯ, ಆಳು, ಹುಡುಗ, ಜವಾನ ಎಂಬ ಪದಗಳ ಗುಣವನ್ನು ತಿಳಿಸುತ್ತವೆ.

| | |
|---|---|
| ಹೆಂಗಸು **ಕರಿಯಳು** | ಹಸುವು **ಕರಿಯದು** |
| ತಂಗಿ **ಪುಟ್ಟವಳು** | ಆನೆ **ದೊಡ್ಡದು** |
| ಹುಡುಗಿ **ಹೊಸಬಳು** | ಕುರ್ಚಿ **ಪುಟ್ಟದು** |

ಇಲ್ಲಿಯೂ ದಪ್ಪಕ್ಷರಗಳಲ್ಲಿರುವ ಪದಗಳು ಅವುಗಳ ಹಿಂದಿರುವ ಪದಗಳ ಗುಣವನ್ನು ತಿಳಿಸುತ್ತವೆ.

**ಕರಿಯನು** ಬಂದನು.

**ಬಿಳಿಯನು** ಮರ ಹತ್ತುತ್ತಾನೆ.

**ದೊಡ್ಡವರು ಕಿರಿಯರಿಗೆ** ಬುದ್ಧಿ ಹೇಳಬಲ್ಲರು.

ಇಲ್ಲಿ ಕರಿಯನು, ಬಿಳಿಯನು, ದೊಡ್ಡವರು, ಕಿರಿಯರಿಗೆ—ಎಂಬುವು ಗುಣವಾಚಕಗಳು. ಇವುಗಳನ್ನು ನಾಮಪದಗಳ ಹಿಂದೆ ಅಥವಾ ಮುಂದೆ ಉಪಯೋಗಿಸಿಲ್ಲ. ಇವು ಇಲ್ಲಿ ಸ್ವತಂತ್ರವಾಗಿವೆ.

### ಅಭ್ಯಾಸ

(೧) ಗುಣವಾಚಕಗಳು — ಎಂದರೇನು ?

(೨) ಈ ವಾಕ್ಯಗಳಲ್ಲಿ ಗುಣವಾಚಕಗಳು ಯಾವುವು ?—

೧. ಕೆಟ್ಟವರು ದೊಡ್ಡವರ ಮುಂದೆ ನಿಲ್ಲಲಾರರು. ೨. ಆತನ ಮಕ್ಕಳಲ್ಲಿ ಚಿಕ್ಕವನು ಬುದ್ಧಿವಂತನು. ೩. ದೊಡ್ಡವನು ಬುದ್ಧಿವಂತನಲ್ಲ. ೪. ಆ ಕರಿಯ ಹಸು ನನ್ನದು. ೫. ಆಳುಗಳಲ್ಲಿ ಹೊಸಬನಿಗಿಂತ ಹಳಬನೇ ಮೇಲು.

(೩) ಈ ಗುಣವಾಚಕಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿ :—

| | | | |
|---|---|---|---|
| ಹಳಬರು | ಬಿಳಿಯದು | ಕಿರಿಯರು | ವಿವೇಕಿಗಳು |
| ಹೊಸಬರು | ಎಳೆಯದು | ಹಿರಿಯರು | ಕರಿಯನು |
| ಒಳ್ಳೆಯ | ಅಂತಹ | ಧರ್ಮಿಷ್ಠರು | ಬಿಳಿಯನು |

---

## ಪಾಠ ೧೫

### ಸಂಖ್ಯಾವಾಚಕ

ಈ ಕೆಲಸಕ್ಕೆ **ಮೂವರು** ಸಾಕು.

ಹಣ್ಣುಗಳಲ್ಲಿ **ಎರಡನ್ನು** ಕೊಡು.

ಗೋವಿಂದನು ತರಗತಿಯಲ್ಲಿ **ಮೊದಲನೆಯವನು.**

ಈ ಪದಗಳಲ್ಲಿ ಮೂವರು, ಎರಡನ್ನು, ಮೊದಲನೆಯವನು — ಇವು ಅಂಕಗಳನ್ನು ಅಥವಾ ಲೆಕ್ಕಮಾಡಿದ ವಸ್ತುಗಳನ್ನು ಹೇಳುತ್ತವೆ. ಇವೂ ಕೂಡ ನಾಮಪದಗಳೇ. ಇವುಗಳನ್ನು 'ಸಂಖ್ಯಾವಾಚಕ'ಗಳೆನ್ನುವರು.

§ ಅಂಕಿಗಳನ್ನಾಗಲಿ, ಲೆಕ್ಕಮಾಡಿದ ವಸ್ತುಗಳನ್ನಾಗಲಿ ತಿಳಿಸುವ ಪದಕ್ಕೆ 'ಸಂಖ್ಯಾವಾಚಕ'ವೆಂದು ಹೆಸರು.

### ಅಭ್ಯಾಸ

(೧) ಸಂಖ್ಯಾವಾಚಕವೆಂದರೇನು ?

(೨) ಈ ಕೆಳಗಿನ ವಾಕ್ಯಗಳಲ್ಲಿ ಸಂಖ್ಯಾವಾಚಕಗಳನ್ನು ತೋರಿಸಿ :—

೧. ನೀತಿಶತಕದಲ್ಲಿ ನೂರು ಪದ್ಯಗಳಿವೆ. ೨. ಈ ಕಿತ್ತಳೆಹಣ್ಣನ್ನು ಮೂರು ಭಾಗವನ್ನಾಗಿ ಮಾಡು. ೩. ಪಾಂಡವರಲ್ಲಿ ಮೂವರು ಕುಂತಿಯ ಮಕ್ಕಳು. ಇಬ್ಬರು ಮಾದ್ರಿಯ ಮಕ್ಕಳು. ೪. ಪರೀಕ್ಷೆಯಲ್ಲಿ ಮೊದಲಿನ ಮೂವರು ಚೆನ್ನಾಗಿ

ಓದಿದ್ದಾರೆ. ೫. ಜೂಜಿನಲ್ಲಿ ನಾಲ್ಕನೆಯ ಕುದುರೆಗೆ ಬಹುಮಾನವಿಲ್ಲ. ೬. ನಮ್ಮ ತರಗತಿಯಲ್ಲಿ ರಂಗನು ಮೊದಲನೆಯವನು.

(೩) ಇಲ್ಲಿ ಬರೆದಿರುವ ಸಂಖ್ಯಾವಾಚಕಗಳನ್ನು ವಾಕ್ಯಗಳಲ್ಲಿ ಪ್ರಯೋಗಿಸಿ :—

| | | | |
|---|---|---|---|
| ಒಂದು | ಹದಿನೈದು | ಐವರು | ಒಂದನೆಯವನು |
| ಸಾವಿರ | ನಾಲ್ಕು | ಮೂವರು | ಹತ್ತನೆಯವನು |

---

## ಪಾಠ ೧೬

### ಸರ್ವನಾಮ Pronoun

ರಾಮನು ದಶರಥನ ಮಗ. ರಾಮನ ಹೆಂಡತಿ ಸೀತೆ. ರಾಮನು ಸೀತೆಯೊಡನೆ ಕಾಡಿಗೆ ಹೋದನು.

ಈ ವಾಕ್ಯಗಳಲ್ಲಿ ರಾಮ ಎಂಬ ಪದವು ಮೂರು ಸಲ ಬಂದಿದೆ. ಹೇಳಿದ್ದನ್ನೇ ತಿರುಗಿ ಹೇಳುವುದರಿಂದ ಕೇಳುವವರಿಗೆ ಬೇಸರವುಂಟಾಗುತ್ತದೆ. ಇದಕ್ಕಾಗಿ ಒಂದು ಸಲ 'ರಾಮ' ಎಂದು ಹೇಳಿದ ಮೇಲೆ ಆ ಪದಕ್ಕೆ ಬದಲಾಗಿ 'ಅವನು' ಎಂಬುದನ್ನು ಬಳಸುವುದು ವಾಡಿಕೆಯಾಗಿದೆ.

ರಾಮನು ದಶರಥನ ಮಗ. ಅವನ ಹೆಂಡತಿ ಸೀತೆ. ಆತನು ಅವಳೊಡನೆ ಕಾಡಿಗೆ ಹೋದನು. ರಾಮನೂ ಲಕ್ಷ್ಮಣನೂ ಬಂದರು; ಇವರಿಬ್ಬರೂ ಗಟ್ಟಿಗರು. ಇವರಿಗೆ ಯಾರ ಭಯವೂ ಇರಲಿಲ್ಲ. ಸೀತೆಯು ದೊಡ್ಡವಳು, ಅವಳ ಮಾತನ್ನು ಕೇಳು.

ಅವನ, ಆತನು, ಅವಳೊಡನೆ, ಇವರಿಬ್ಬರೂ, ಇವರಿಗೆ, ಅವಳ—ಇವು ರಾಮ, ಸೀತೆ ಎಂಬ ಪದಗಳಿಗೆ ಪ್ರತಿಯಾಗಿ ನಿಂತಿವೆ. ಹೀಗೆ ನಾಮಪದ, ಗುಣವಾಚಕ, ಸಂಖ್ಯಾವಾಚಕಗಳಿಗೆ ಬದಲಾಗಿ ಉಪಯೋಗಿಸುವ ಪದಕ್ಕೆ '**ಸರ್ವನಾಮ**' ಎಂದು ಹೆಸರು.

ಕೆಳಗೆ ಇವುಗಳಲ್ಲಿ ಕೆಲವು ಸರ್ವನಾಮಗಳನ್ನು ಬರೆದಿದೆ. ನಾನು, ನಾವು, ನೀನು, ನೀವು, ತಾನು, ತಾವು ಎಂಬುದನ್ನು ಎಲ್ಲ ಲಿಂಗಗಳಲ್ಲಿಯೂ ಉಪಯೋಗಿಸಬಹುದು.

| | ಏಕ. | ಬಹು. |
|---|---|---|
| | ನಾನು | ನಾವು |
| | ನೀನು | ನೀವು |
| | ತಾನು | ತಾವು |
| | ಏಕ. | ಬಹು. |
| ಪುಲ್ಲಿಂಗ : Masc | ಅವನು, ಆತನು | ಅವರು |
| | ಇವನು, ಈತನು | ಇವರು |
| | ಯಾವನು ? | ಯಾರು ? |
| ಸ್ತ್ರೀಲಿಂಗ : Fem | ಅವಳು, ಆಕೆ | ಅವರು |
| | ಇವಳು, ಈಕೆ | ಇವರು |
| | ಯಾವಳು ? | ಯಾರು ? |
| ನಪುಂಸಕಲಿಂಗ : Neuter | ಅದು | ಅವು |
| | ಇದು | ಇವು |
| | ಯಾವುದು ? | ಯಾವುವು ? |
| | ಏನು ? | |

## ಅಭ್ಯಾಸ

(೧) ಸರ್ವನಾಮವೆಂದರೇನು ?

(೨) ಇಲ್ಲಿರುವ ಸರ್ವನಾಮಗಳನ್ನು ಗುರುತಿಸಿ :—

೧. ಹುಡುಗರು ಶಾಲೆಗೆ ಹೋಗಿದ್ದಾರೆ ; ಅವರು ಬರುವುದು ಸಂಜೆಗೇ. ೨. ಹಸುಗಳನ್ನು ಚೆನ್ನಾಗಿ ಸಾಕಿದರೆ, ಅವು ಹಾಲನ್ನು ಹೆಚ್ಚಾಗಿ ಕೊಡುವುವು. ೩. ಅದರಿಂದ ಬೆಣ್ಣೆ, ತುಪ್ಪ, ಮೊಸರು ಮುಂತಾದುವು ಆಗುತ್ತವೆ. ೪. ಸೀತೆ ರಾಮನ ಹೆಂಡತಿ ; ಎಲ್ಲರೂ ಆಕೆಯಂತೆ ಪತಿವ್ರತೆಯರಾಗಿರಬೇಕು. ೫. ತಾವು ದೊಡ್ಡವರು ; ತಮ್ಮ ಮಾತನ್ನು ಕೇಳುತ್ತೇವೆ. ೬. ಇಬ್ಬರು ಹುಡುಗರೂ ಬುದ್ಧಿವಂತರು ; ಇವರಿಗೆ ಉಪಾಧ್ಯಾಯರನ್ನು ಕಂಡರೆ ಬಲುಗೌರವ.

(೩) ಈ ಸರ್ವನಾಮಗಳನ್ನು ವಾಕ್ಯಗಳಲ್ಲಿ ಉಪಯೋಗಿಸಿ :—

| | | | |
|---|---|---|---|
| ಅವನು | ಅವರು | ಯಾರು | ಈಕೆ |
| ಅದು | ಆತನು | ಯಾವುದು | ಈತನು |
| ಏನು | ಇದು | ಅವು | ಆಕೆ |

## ಪಾಠ ೧೭

### ಕ್ರಿಯಾಪದ—ಬಗೆಗಳು

೧. ರಾಮನು ಗೆದ್ದನು. ೨. ಭೀಮನು ಬಕಾಸುರನನ್ನು ಕೊಂದನು. ೩. ಲಕ್ಷ್ಮಣನು ನಿಂತನು. ೪. ಮೃಗಗಳು ಓಡಿದುವು. ೫. ದಾಸರು ಬಂದರು. ೬. ಬಾಲಕರು ಪಾಠಗಳನ್ನು ಓದಿದರು.

ಈ ವಾಕ್ಯಗಳಲ್ಲಿರುವ ಕ್ರಿಯಾಪದಗಳನ್ನು ಕೆಳಗೆ ತೋರಿಸಿದೆ.

ಗೆದ್ದನು, ನಿಂತನು, ಬಂದರು, ಕೊಂದನು, ಓಡಿದುವು, ಓಡಿದರು.

ಕ್ರಿಯಾಪದದ ಮೇಲೆ ಏನನ್ನು ? ಯಾರನ್ನು ? ಎಂಬ ಪ್ರಶ್ನೆಗಳನ್ನು ಹಾಕಿದಾಗ, ಅವಕ್ಕೆ ಉತ್ತರ ಬಂದರೆ ಕರ್ಮಪದವಿದೆ ಎಂದು ತಿಳಿದುಬರುತ್ತದೆ. ಇಂಥ ಕರ್ಮಪದವುಳ್ಳ ಕ್ರಿಯಾಪದಕ್ಕೆ "ಸಕರ್ಮಕ ಕ್ರಿಯಾಪದ" ಎಂದು ಹೆಸರು. Transitive verb

ಎರಡನೆಯ ವಾಕ್ಯದಲ್ಲಿರುವ 'ಕೊಂದನು' ಎಂಬುದರ ಮೇಲೆ 'ಯಾರನ್ನು ?' ಎಂಬ ಪ್ರಶ್ನೆಯನ್ನು ಹಾಕಿದರೆ, 'ಬಕಾಸುರನನ್ನು' ಎಂಬ ಉತ್ತರವು ಬರುತ್ತದೆ. ಆದುದರಿಂದ ಅದು ಸಕರ್ಮಕ ಕ್ರಿಯಾಪದ. (ಆರನೆಯ ವಾಕ್ಯದ 'ಓದಿದರು' ಎಂಬ ಕ್ರಿಯಾಪದವೂ ಇಂತಹುದೇ.)

ಆದರೆ, ಮೂರನೆಯ ವಾಕ್ಯದಲ್ಲಿರುವ 'ನಿಂತನು' ಎಂದ ಬಳಿಕ ಕ್ರಿಯಾಪದಕ್ಕೆ 'ಏನನ್ನು ?' 'ಯಾರನ್ನು ?' ಎಂಬ ಪ್ರಶ್ನೆಗಳನ್ನು ಹಾಕಿ ನೋಡಿ. ಉತ್ತರವೇ ಬರುವುದಿಲ್ಲ. ಇದಕ್ಕೆ ಕರ್ಮಪದವಿಲ್ಲದ ಕ್ರಿಯಾಪದ ಅಥವಾ 'ಅಕರ್ಮಕ ಕ್ರಿಯಾಪದ' ಎಂದು ಹೆಸರು. Intransitive

§ ಕ್ರಿಯಾಪದಗಳಲ್ಲಿ **ಸಕರ್ಮಕ ಕ್ರಿಯಾಪದ, ಅಕರ್ಮಕ ಕ್ರಿಯಾಪದ** ಎಂದು ಎರಡು ಬಗೆ.

**ಸಕರ್ಮಕ ಕ್ರಿಯಾಪದವು** ಕರ್ಮಪದವನ್ನು ಅಪೇಕ್ಷಿಸುತ್ತದೆ

**ಅಕರ್ಮಕ ಕ್ರಿಯಾಪದಕ್ಕೆ** ಕರ್ಮಪದವು ಬೇಕಿಲ್ಲ.

## ಅಭ್ಯಾಸ

(೧) ಈ ವಾಕ್ಯಗಳಲ್ಲಿರುವ ಕ್ರಿಯಾಪದಗಳು ಅಕರ್ಮಕವೇ ಸಕರ್ಮಕವೇ ತಿಳಿಸಿ :—

೧. ಧರ್ಮವನ್ನು ಮಾಡು. ೨. ಕೀರ್ತಿಯನ್ನು ಹೊಂದು. ೩. ನ್ಯಾಯವಾಗಿ ಇರು. ೪. ಉತ್ತಮ ಪದವಿ ಬರುವುದು. ೫. ನಳನು ಕಷ್ಟವನ್ನು ಅನುಭವಿಸಿದನು. ೬. ರಾಮನು ದುಷ್ಟರನ್ನು ಸಂಹರಿಸಿದನು. ೭. ಅವನಿಗೆ ಒಳ್ಳೆಯ ಹೆಸರು ಬಂದಿತು. ೮. ಪುಣ್ಯಶಾಲಿಗೆ ಒಳ್ಳೆಯದಾಗುವುದು. ೯. ಪಾಪಿ ಹಾಳಾಗುವನು. ೧೦. ನೀವೂ ಬನ್ನಿರಿ.

(೨) ಈ ಕೆಳಗಿನ ವಾಕ್ಯಗಳನ್ನು ಪೂರ್ತಿಮಾಡಿ :—*

೧. — ಬಿಟ್ಟು ಹೋಗಬೇಡ. ೨. ಕಪಿಯು— ಸುಟ್ಟಿತು. ೩. ರಾಮನು — ರಕ್ಷಿಸುತ್ತಾನೆ. ೪. ರಾಮನು — ಗೆದ್ದನು. ೫. ದೇವತೆಗಳು — ನೋಡಿದರು. ೬. ಊರಿಗೆ — ಬರುತ್ತಾನೆ. ೭. ಮರದಿಂದ — ಬಿದ್ದುವು, ೮. — ಬೀಸಿತು. ೯. — ನಾವು ಕಂಡೆವು. ೧೦. ಶೆಟ್ಟರು — ಎಣಿಸಿದರು.

---

## ಪಾಠ ೧೮

### ಕ್ರಿಯಾಪದ—ಕಾಲಗಳು tense

A. ೧. ನಿನ್ನೆ ಕೃಷ್ಣನು ಬಂದನು.
ಇವೊತ್ತು ಕೃಷ್ಣನು ಬರುತ್ತಾನೆ.
ನಾಳಿದ್ದು ಕೃಷ್ಣನು ಬರುವನು.

೨. ರಾಮನು ಪಾಠವನ್ನು ಓದಿದನು.
ರಾಮನು ಪಾಠವನ್ನು ಓದುತ್ತಾನೆ.
ರಾಮನು ರಾತ್ರಿ ಪಾಠವನ್ನು ಓದುವನು.

೩. ಸೀತೆ ನಿನ್ನೆ ಊರಿಗೆ ಹೋದಳು.
ಅಕ್ಕನು ಈಗ ಹಳ್ಳಿಗೆ ಹೋಗುತ್ತಾಳೆ.
ಅಮ್ಮನು ನಾಳೆ ಅಣ್ಣನ ಮನೆಗೆ ಹೋಗುವಳು.

---

* ಮೇಲೆ ಗೀಟುಗಳ ಸ್ಥಳಗಳಲ್ಲಿರಬೇಕಾದ ಪದಗಳನ್ನು ಈ ಪಟ್ಟಿಯಿಂದ ಆರಿಸಿ:—

ಹಣವನ್ನು, ಎಲ್ಲರನ್ನೂ, ಮನೆಯನ್ನು, ಶತ್ರುವನ್ನು, ಊರನ್ನು, ರಾಕ್ಷಸರನ್ನು, ಹಣ್ಣುಗಳು, ಅಣ್ಣನು, ಮರವನ್ನು, ಗಾಳಿ.

೪. ಇಲಿ ಬಟ್ಟೆಗಳನ್ನು ನಿನ್ನೆ **ಕಡಿಯಿತು.**
ಇಲಿ ಬಳೆಯನ್ನು **ಕಡಿಯುತ್ತದೆ.**
ಇಲಿ ರೊಟ್ಟಿಯ ಚೂರನ್ನು **ಕಡಿಯುವುದು.**

೫. ಮನೆಯ ಕೆಲಸವನ್ನು ಸೀತೆ ನಿನ್ನೆ **ಮಾಡಿದಳು.**
ಈಗ ಸೀತೆ ಕೆಲಸವನ್ನು **ಮಾಡುತ್ತಾಳೆ.**
ನಾಳೆ ಸೀತೆ ತಿಂಡಿಯನ್ನು **ಮಾಡುವಳು.**

B. ಗುರುಗಳು ಮೊನ್ನೆ ರಾತ್ರಿ **ಬಂದರು.**
ಗುರುಗಳು ಇವೊತ್ತು **ಬರುತ್ತಾರೆ.**
ಗುರುಗಳು ನಾಳೆ **ಬರುವರು.**

ಮೇಲೆ ಕೊಟ್ಟಿರುವ ವಾಕ್ಯಗಳಲ್ಲಿ (ದಪ್ಪಕ್ಷರಗಳಲ್ಲಿ) ಕ್ರಿಯಾಪದಗಳ ರೂಪದಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ಈ ವ್ಯತ್ಯಾಸವು ಕ್ರಿಯಾಪದವು ಹೇಳುವ ಕೆಲಸವು ಯಾವಾಗ ನಡೆಯಿತೆಂಬುದನ್ನು ಹೇಳುತ್ತದೆ.

ನಿನ್ನೆ ಕೃಷ್ಣನು ಬಂದನು.
ರಾಮನು ಪಾಠವನ್ನು ಓದಿದನು.
ಇಲಿ ಬಟ್ಟೆಯನ್ನು ಕಡಿಯಿತು.
ಸೀತೆ ಕೆಲಸವನ್ನು ಮಾಡಿದಳು.

ಈ ವಾಕ್ಯಗಳಲ್ಲಿ ಬಂದನು, ಓದಿದನು, ಕಡಿಯಿತು, ಮಾಡಿದಳು ಎಂಬ ಕ್ರಿಯಾಪದಗಳು ಕೆಲಸವು ಹಿಂದೆ ಆಯಿತು ಎಂಬ ಅರ್ಥವನ್ನು ಕೊಡುತ್ತವೆ. ಕ್ರಿಯಾಪದದ ಈ ರೂಪಕ್ಕೆ "**ಭೂತಕಾಲ**" ಎಂದು ಹೆಸರು. ಭೂತಕಾಲ ಎಂದರೆ ಹಿಂದೆ ನಡೆದುಹೋದ ಅಥವಾ ಆಗಿ ಹೋದ ಕಾಲ ಎಂದು ಅರ್ಥ.

ಬರುತ್ತಾನೆ, ಓದುತ್ತಾನೆ, ಹೋಗುತ್ತಾಳೆ, ಕಡಿಯುತ್ತದೆ — ಎಂಬ ಕ್ರಿಯಾಪದಗಳು "**ವರ್ತಮಾನ ಕಾಲದ**" ರೂಪಗಳು. ಕೆಲಸವು ಈಗ ಆಗುತ್ತಾ ಇದೆ ಎಂಬ ಅರ್ಥವನ್ನು ಇವು ಕೊಡುತ್ತವೆ. 'ವರ್ತಮಾನಕಾಲ' ಎಂದರೆ 'ಈಗ ನಡೆಯುತ್ತಿರುವ ಕಾಲ—ಈಗಿನ ಕಾಲ' ಎಂದರ್ಥ.

ಬರುವನು, ಓದುವನು, ಹೋಗುವಳು, ಮಾಡುವಳು, ಕಡಿಯುವುದು — ಇವು 'ಕೆಲಸವು ಮುಂದೆ ಆಗುವುದು' ಎಂಬ ಅರ್ಥವನ್ನು ಕೊಡುತ್ತವೆ. ಇವು '**ಭವಿಷ್ಯತ್ಕಾಲದ ಕ್ರಿಯಾರೂಪಗಳು**' ಭವಿಷ್ಯತ್ ಎಂದರೆ ಮುಂದಿನದು. ಭವಿಷ್ಯತ್ಕಾಲ ಎಂದರೆ ಮುಂದೆ ನಡೆಯುವ ಕಾಲ. Future tense = time yet to come

ಹೀಗೆ ಕ್ರಿಯಾಪದಕ್ಕೆ ಮೂರು ಕಾಲಗಳುಂಟು :—ಭೂತಕಾಲ, ವರ್ತಮಾನಕಾಲ, ಭವಿಷ್ಯತ್ಕಾಲ.

## ಅಭ್ಯಾಸ

ಇಲ್ಲಿ ಬರೆದಿರುವ ವಾಕ್ಯಗಳಲ್ಲಿ ಕ್ರಿಯಾಪದಗಳು ಯಾವ ಕಾಲವನ್ನು ಸೂಚಿಸುವುವು :—

೧. ಇಂಗ್ಲೀಷರು ಮೊದಲು ವರ್ತಕರಾಗಿ ಬಂದರು. ಅವರು ನಮ್ಮನ್ನು ಆಳುತ್ತಿದ್ದಾರೆ. ೨. ಅರಿಯದವರು ಕೊಳೆಯ ನೀರನ್ನು ಕುಡಿಯುತ್ತಾರೆ. ೩. ಇದರಿಂದ ರೋಗಗಳು ಬರುವುವು. ೪. ಬೇಟೆಗಾರರು ಹುಲಿಯನ್ನು ಕೊಂದರು.

೨. ಕೆಳಗೆ ಬರೆದಿರುವ ಕ್ರಿಯಾಪದಗಳನ್ನು ಸೇರಿಸಿ ವಾಕ್ಯಗಳನ್ನು ರಚಿಸಿ ;—

| | |
|---|---|
| ಹೇಳುತ್ತೇನೆ | ತಿಳಿದನು |
| ನಡೆದನು | ಮಾಡುವೆನು |
| ಭಾವಿಸುತ್ತೇನೆ | ಆರಿಸುತ್ತೇನೆ |
| ಓದುತ್ತಾನೆ | ಮಾಡುವೆನು |
| ಅರಿತನು | ಬರೆದೆನು |

---

## ಪಾಠ ೧೯

### ಅವ್ಯಯ changeless or unchanging

ಗುಲಾಬಿಯ ಹೂವಿನಲ್ಲಿ ಎರಡು ಜಾತಿಗಳು **ಉಂಟು**.

ರಾಮನಿಗೆ ತಂಗಿಯೊಬ್ಬಳು **ಉಂಟು**.

ಮನೆಯ **ಸುತ್ತ**ಲೂ ಗೋಡೆಯಿದೆ.

ಬಾವಿಯ **ಸುತ್ತ**ಲೂ ಜನರು ನಿಂತಿದ್ದಾರೆ.

ಮಗು **ಕಪ್ಪಗೆ** ಇದೆ.

ಇದ್ದಲು **ಕಪ್ಪಗೆ** ಇದೆ.

ಮೈ **ಬೆಚ್ಚಗೆ** ಇದೆ.

ನೀರು **ತಣ್ಣಗೆ** ಇದೆ.

ಅವನು **ಫಕ್ಕನೆ** ನಕ್ಕನು.

ಅವಳು **ಸರ್ರನೆ** ಓಡಿದಳು.

ಸೌದೆ **ಛಟಛಟನೆ** ಉರಿಯಿತು.

ರಾಮನು ಓದುತ್ತಾನೆ; **ಆದರೆ** ಪುಸ್ತಕದಲ್ಲಿರುವ ಮಾತುಗಳ ಅರ್ಥವೇ ತಿಳಿಯದು.

ರಾಮನು **ಮತ್ತು** ಕೃಷ್ಣನು ಹಣ್ಣನ್ನು ತಿಂದರು.

ಒಳ್ಳೆಯ **ನಡೆಯೂ, ನುಡಿಯೂ** ಮನುಷ್ಯನಿಗೆ ಭೂಷಣಗಳು.

ಒಡವೆ**ಯಾಗಲಿ,** ಬಟ್ಟೆ**ಗಳಾಗಲಿ,** ಹಣವೇ **ಆಗಲಿ** ಭೂಷಣವಲ್ಲ

ನಿಮ್ಮ ಮನೆಯ **ವರೆಗೆ** ಬರುತ್ತೇನೆ.

ನೀನು **ಹಾಗೆ** ಮಾಡು ; ನಾನು ಹೀಗೆ ಮಾಡುತ್ತೇನೆ ; ಅವನು ಹೇಗೆ ಮಾಡಬಲ್ಲ ?

**ಭಲಾ** ! ನೀನೇ ಸಾಹಸಿ.

**ಅಯ್ಯೋ** ! ಒಳ್ಳೆಯವರಿಗೆ ಸುಖವೆಲ್ಲಿ ಬಂತು ?

ಮೇಲಿನ ವಾಕ್ಯಗಳಲ್ಲಿ ಸುತ್ತಲೂ, ಕಪ್ಪಗೆ, ಬೆಚ್ಚಗೆ, ತಣ್ಣಗೆ, ಫಕ್ಕನೆ, ಸರ್ರನೆ, ಉಂಟು, ಛಟಛಟನೆ, ಆದರೆ, ಮತ್ತು, ಊ, ಆಗಲಿ, ವರೆಗೆ, ಹೀಗೆ, ಹಾಗೆ, ಹೇಗೆ, ಭಲಾ, ಅಯ್ಯೋ—ಎಂಬ ಪದಗಳು ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗ ಶಬ್ದಗಳೊಡನೆ ಸೇರಿದಾಗ ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಹೀಗೆ ನಾಮಪದ, ಕ್ರಿಯಾ ಪದಗಳಂತೆ ಯಾವ ಬಗೆಯ ವ್ಯತ್ಯಾಸವನ್ನೂ ಹೊಂದದ ಇಂತಹ ಪದಕ್ಕೆ 'ಅವ್ಯಯ' ಎಂದು ಹೆಸರು.

ಲಿಂಗ, ವಚನ, ವಿಭಕ್ತಿಗಳಲ್ಲಿ ಯಾವ ಬದಲಾವಣೆಯನ್ನೂ ಹೊಂದದೆ ಒಂದೇ ರೀತಿಯಾಗಿರುವ ಪದಗಳಿಗೆ '**ಅವ್ಯಯಗಳು**' ಎಂದು ಹೆಸರು. Words which do not undergo any chang

## ಅಭ್ಯಾಸ

(೧) ಅವ್ಯಯ—ಎಂದರೇನು ?

(೨) ಈ ವಾಕ್ಯಗಳಲ್ಲಿರುವ ಅವ್ಯಯಗಳನ್ನು ಗುರುತಿಸಿರಿ :—

೧. ಹುಡುಗರು ಮೆಲ್ಲಗೆ ಓದಬೇಕು. ೨. ಚಿಕ್ಕಂದಿನಲ್ಲಿ ಕಾಲಕಳೆದರೆ ಒಳಿಕ ವಿದ್ಯೆ ಹತ್ತುವುದಿಲ್ಲ. ೩. ಹಾವು ಸರಸರನೆ ಹರಿಯಿತು. ೪. ಓದುವುದರಿಂದ ಜ್ಞಾನವೊಂದೇ ಅಲ್ಲದೆ ಆನಂದವೂ ಆಗುವುದು. ೫. ನೀನಾಗಲಿ ಅವನಾಗಲಿ ಹೋಗಿ ಬನ್ನಿರಿ. ೬. ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ. ೭. ಭಲಾ ! ನೀನೇ ಶೂರ. ೮. ಏನು ! ಗೋವಿಂದನು ಚಾಡಿಕೋರನೇ ?

(೩) ಈ ಅವ್ಯಯಗಳನ್ನು ವಾಕ್ಯಗಳಲ್ಲಿ ಪ್ರಯೋಗಿಸಿ :—

| | | |
|---|---|---|
| ಸಾಕು | ಇಲ್ಲ | ಹೊರತು |
| ಉಂಟು | ಬೇಡ | ಅಹಹ |
| ತರುವಾಯ | ಬೇಗ | ಓಹೋ ! |
| ಎಂದಿಗೂ | ವರೆಗೆ | ಅಯ್ಯೋ! |
| ಥಟ್ಟನೆ | ತನಕ | |
| ಒಂದಿಗೆ | ಅಲ್ಲದೆ | |

———

# ಎರಡನೆಯ ಭಾಗ

---

## ಪಾಠ ೧*

### ಪೀಠಿಕೆ

ಮನಸ್ಸಿನಲ್ಲಿ ಹುಟ್ಟುವ ವಿಚಾರಗಳನ್ನು ಇತರರಿಗೆ ತಿಳಿಸಬೇಕಾದರೆ ನಾಲ್ಕು ದಾರಿಗಳಿವೆ:—

೧. **ಬಾಯಿಮಾತು** ೨. **ಬರೆವಣಿಗೆ** writing

೩. **ಸನ್ನೆಗಳು** ೪. **ಚಿತ್ರಗಳು**

ಇವುಗಳಲ್ಲಿ ಮುಖ್ಯವಾದುವು ಬಾಯಿಮಾತು ಮತ್ತು ಬರೆವಣಿಗೆ. ಇವೆರಡೂ ಬಹುಕಾಲದಿಂದಲೂ ಬಳಕೆಯಲ್ಲಿರುವುವು. ನಾವು ಬರೆಯುವಾಗಲೂ, ಮಾತಾಡುವಾಗಲೂ ಇತರರಿಗೆ ತಿಳಿದ ಮಾತುಗಳನ್ನೇ ಉಪಯೋಗಿಸಬೇಕು. ಹೀಗೆ ಜನರು ಉಪಯೋಗಿಸುವ ಮಾತಿನ ಸಮುದಾಯಕ್ಕೆ 'ಭಾಷೆ' ಎಂದು ಹೆಸರು. ಒಂದೊಂದು ದೇಶದಲ್ಲಿ ಒಂದೊಂದು ಭಾಷೆಯನ್ನು ಉಪಯೋಗಿಸುತ್ತಾರೆ. ನಮ್ಮ ದೇಶದಲ್ಲಿ ಬಳಕೆಯಲ್ಲಿರುವ ಭಾಷೆಗೆ 'ಕನ್ನಡ' ಎಂದು ಹೆಸರು.

ಸೂರ್ಯನು ಹುಟ್ಟುವನು. ಹಕ್ಕಿ ಹಾರಿತು.
ಮಗು ಆಡುತ್ತದೆ. ಕಪಿ ಮರವನ್ನು ಹತ್ತುತ್ತದೆ.

ಮೇಲೆ ಬರೆದಿರುವ ಮಾತುಗಳು ಇತರರಿಗೆ ಅರ್ಥವಾಗುವಂತಿವೆ.

ಇತರರಿಗೆ ಅರ್ಥವಾಗುವಂತೆ ಜೋಡಿಸಿರುವ ಮಾತುಗಳ ಗುಂಪಿಗೆ 'ವಾಕ್ಯ' ಎಂದು ಹೆಸರು. ಅರ್ಥವನ್ನು ಕೊಡದ ಮಾತುಗಳ ಗುಂಪು ವಾಕ್ಯವಲ್ಲ.

ಮಾತುಗಳನ್ನು ಕೆಲವು ಗುಂಪುಗಳಲ್ಲಿ ಅಡಗಿಸಬಹುದು.

| | | | | |
|---|---|---|---|---|
| ೧. | ಸೂರ್ಯ | ಮನೆ | ದೇಶ | ರಾಜ |
| | ಚಂದ್ರ | ಹೂವು | ಜನ | ಗುರು |
| ೨. | ಆಟ | ನ್ಯಾಯ | | |
| | ನೋಟ | | | |

---

* ಒಂದನೆಯ ಭಾಗದ ಒಂದನೆಯ ಪಾಠವನ್ನು ನೋಡಿ.

ಮೇಲಿನ ಗುಂಪುಗಳ ಪದಗಳನ್ನು ನೋಡೋಣ. ಮೊದಲನೆಯ ಗುಂಪು ವಸ್ತುಗಳ, ದೇಶದ ಅಥವಾ ಮನುಷ್ಯರ ಹೆಸರನ್ನೂ, ಎರಡನೆಯ ಗುಂಪು ಭಾವಗಳ ಹೆಸರನ್ನೂ ಸೂಚಿಸುತ್ತದೆ.

ಹೀಗೆ ಒಂದು ವಸ್ತುವಿನ, ಒಬ್ಬ ಮನುಷ್ಯನ, ಒಂದು ಸ್ಥಳದ ಅಥವಾ ಒಂದು ಭಾವದ ಹೆಸರನ್ನು ಸೂಚಿಸುವ ಪದಕ್ಕೆ 'ನಾಮಪದ' ಎಂದು ಹೆಸರು.

ಈ ಪದಗಳನ್ನು ನೋಡಿ:—

| | | |
|---|---|---|
| ಆಡು | ಕರೆ | ಹೇಳು |
| ಬರೆ | ಹಾಡು | ಕೇಳು |

ಇವು ಹೆಸರನ್ನು ಸೂಚಿಸುವ ಪದಗಳಲ್ಲ. ಇಲ್ಲಿ ಕೆಲಸವನ್ನು ಸೂಚಿಸುತ್ತವೆ.

ಹೀಗೆ ಕೆಲಸವನ್ನು ಸೂಚಿಸುವ ಪದಕ್ಕೆ 'ಧಾತು' ಎಂದು ಹೆಸರು.

## ಉದಾಹರಣೆ

ರಾಮನು ಹೋಗುತ್ತಾನೆ. ಸೂರ್ಯನಿಂದ ಬೆಳಕು ಬರುವುದು. ಗಿಡದಲ್ಲಿ ಹೂವು ಅರಳುವುದು.

ಮೇಲೆ ಕಂಡ ವಾಕ್ಯಗಳಲ್ಲಿ ರಾಮ, ಸೂರ್ಯ, ಗಿಡ ಎಂಬ ನಾಮಪದಗಳನ್ನೂ, ಹೋಗು, ಬರು, ಅರಳು ಎಂಬ ಧಾತುಗಳನ್ನೂ ಬೇರೆ ಬೇರೆ ರೂಪಗಳಲ್ಲಿ ಉಪಯೋಗಿಸಿದೆ.

ಹೀಗೆ ನಾಮಪದ ಕ್ರಿಯಾಪದಗಳನ್ನು ವಾಕ್ಯಗಳಲ್ಲಿ ಪ್ರಯೋಗಿಸುವಾಗ ಅವುಗಳ ರೂಪಗಳು ಬೇರೆಯಾಗುವುವು.

ಕೆಳಗೆ ಬರೆದಿರುವ ಪದಗಳನ್ನು ನೋಡಿ:—

ಈಗ **ಆಟ ಸಾಕು**. ಅಯ್ಯೋ! ಅವನಿಗೆ ಗಾಯವಾಯಿತೇ!

ಅವನು ಮನೆಯಲ್ಲಿ **ಇಲ್ಲ**. ನನಗೆ **ತಿಂಡಿ ಬೇಕು**.

**ಭಲಾ**' ಸಾಹಸಿ ನೀನು. ಬೆಟ್ಟದ ಮೇಲೆ ದೇವಾಲಯ **ಉಂಟು**.

ಇವು (ದಪ್ಪಕ್ಷರದ ಪದಗಳು) ಯಾವ ವಾಕ್ಯಗಳಲ್ಲಿ ಬಂದರೂ, ಅವುಗಳ ರೂಪವು ಬದಲಾವಣೆ ಹೊಂದುವುದಿಲ್ಲ.

ವಾಕ್ಯಗಳಲ್ಲಿ ಪ್ರಯೋಗಿಸಲ್ಪಟ್ಟಾಗಲೂ ರೂಪದಲ್ಲಿ ಬದಲಾವಣೆ ಹೊಂದದ ಪದಗಳಿಗೆ 'ಅವ್ಯಯಗಳು' ಎಂದು ಹೆಸರು.

ಹೀಗೆ ಪದಗಳಲ್ಲಿ ಮೂರು ದೊಡ್ಡ ಗುಂಪುಗಳನ್ನು ಮಾಡಬಹುದು ; 1 ನಾಮಪದ, 2 ಕ್ರಿಯಾಪದ, 3 ಅವ್ಯಯ.

## ಅಭ್ಯಾಸ

(೧) ನಾಮಪದ, ಅವ್ಯಯ—ಎಂದರೇನು ?

(೨) ಅವ್ಯಯ, ಧಾತು—ಇವುಗಳಿಗಿರುವ ಭೇದವನ್ನು ತಿಳಿಸಿ.

(೩) ಈ ವಾಕ್ಯಗಳಲ್ಲಿ ಅವ್ಯಯ—ಧಾತು—ನಾಮಪದಗಳನ್ನು ತೋರಿಸಿ :—

೧. ಈ ಊರಿನ ಹತ್ತಿರ ಹುಲಿಗಳುಂಟು. ೨. ಈಗ ಮೆಲ್ಲಗೆ ನಡೆ. ೩. ಅವನ ಕಣ್ಣು ಕೆಂಪಗಿದೆ. ೪. ಆಹಾ, ನಿನ್ನ ಬುದ್ಧಿ ನನಗೆ ತಿಳಿಯದೆ? ೫. ಬೆಂಕಿ ಭುಗ್ಗೆಂದು ಹತ್ತಿಕೊಂಡಿತು.

---

## ಪಾಠ ೨

### ನಾಮಪದ (ವಿಭಾಗಗಳು)

ಈ ಪದಗಳನ್ನು ನೋಡಿ :—

| | | | | |
|---|---|---|---|---|
| ೧. | ರಾಮಕೃಷ್ಣ | ನದಿ | ಹಲಗೆ | |
| | ಗೌತಮಬುದ್ಧ | ಕಿಟಕಿ | ಹಸು | |
| ೨. | ಹಳೆಯದು | ಅಂಥ | ಇಂಥ | ಎಷ್ಟು |
| | ಹೊಸದು | ಇಷ್ಟು | ಎಂಥ | ಅಷ್ಟು |
| ೩. | ತೊಂಭತ್ತಾರು | ನೂರಹತ್ತು | | |
| | ಸಾವಿರ | ನಲವತ್ತೊಂದು | | |
| ೪. | ಆಟ ಓಟ | | | |
| | ಸಿರಿತನ | | | |
| ೫. | ಅವನು ಅವಳು | ಅದು | | |
| | ನೀನು ನಾನು | | | |

ಮೇಲೆ ಬರೆದಂತೆ ಪದಗಳು ಐದು ಗುಂಪುಗಳಾಗಿ ಒಡೆದಿವೆ.

೧. ಒಂದನೆಯ ಗುಂಪಿನ ಪದಗಳು ವಸ್ತುಗಳ ಹೆಸರುಗಳನ್ನು ಸೂಚಿಸುವುವು. ಇವುಗಳಿಗೆ '**ವಸ್ತುವಾಚಕ**' ಎಂದು ಹೆಸರು.

೨. ಎರಡನೆಯ ಗುಂಪಿನ ಪದಗಳು ವಸ್ತುಗಳ ಗುಣವನ್ನು ತಿಳಿಸುತ್ತವೆ. ಇವಕ್ಕೆ '**ಗುಣವಾಚಕ**' ಎಂದು ಹೆಸರು.

೩. ಮೂರನೆಯ ಗುಂಪಿನ ಪದಗಳು ಸಂಖ್ಯೆಗಳನ್ನು ಸೂಚಿಸುವುವು. ಇವಕ್ಕೆ '**ಸಂಖ್ಯಾವಾಚಕ**' ಎಂದು ಹೆಸರು.

೪. ನಾಲ್ಕನೆಯ ಗುಂಪಿನ ಪದಗಳು ಭಾವವನ್ನು ಸೂಚಿಸುವುವು. ಇವುಗಳಿಗೆ '**ಭಾವನಾಮ**' ಎಂದು ಹೆಸರು.

೫. ಐದನೆಯ ಗುಂಪಿನ ಪದಗಳನ್ನು ವಸ್ತುವಾಚಕ, ಗುಣವಾಚಕ, ಸಂಖ್ಯಾವಾಚಕ, ಭಾವನಾಮಗಳಿಗೆ ಬದಲಾಗಿ ಉಪಯೋಗಿಸಬಹುದು. ಇವುಗಳಿಗೆ '**ಸರ್ವನಾಮ**' ಎಂದು ಹೆಸರು.

### ಅಭ್ಯಾಸ

(೧) ನಾಮಪದದ ಬಗೆಗಳನ್ನು ತಿಳಿಸಿ.

(೨) ಕೆಳಗಿನ ವಾಕ್ಯಗಳಲ್ಲಿ ನಾಮಪದಗಳನ್ನು ತಿಳಿಸಿ :—

೧. ನದಿ ಹರಿಯುತ್ತದೆ. ೨. ಬೆಂಕಿ ಸುಟ್ಟಿತು. ೩. ಹಾವಿನ ಬಣ್ಣ ಕೆಂಪು. ೪. ಅವನು ತುಂಟತನದಿಂದ ಹಾಳಾದನು. ೫. ಪಾಂಡವರು ಕಾಡಿಗೆ ಹೋದರು. ೬. ಶಾಲೆ ಮುಚ್ಚಿದೆ.

(೩) ಗೀಟು ಹಾಕಿರುವ ಕಡೆ ನಾಮಪದಗಳನ್ನು ಸೇರಿಸಿ :—

೧. —ಹುಟ್ಟುತ್ತದೆ. ೨. —ಓದುತ್ತಾನೆ. ೩. — ಹಾರುತ್ತದೆ. ೪. — ತಿನ್ನುವುದುಂಟು. ೫. ನಾವು — ಕಲಿಯದಿರಬಾರದು.

---

## ಪಾಠ ೩*

### ವಸ್ತುವಾಚಕ—ವಿಭಾಗ

ಈ ವಸ್ತುವಾಚಕಗಳನ್ನು ನೋಡಿ :—

| | | | | | |
|---|---|---|---|---|---|
| ೧. | ಮರ | ೨. | ರಘು | ೩. | ಕಿವುಡ |
| | ಕುರಿ | | ರಾಧೆ | | ಮೂಗ |
| | ಬೆಟ್ಟ | | ಗಣೇಶ | | ತುಂಟ |

---

* ಒಂದನೆಯ ಭಾಗದ ಆರನೆಯ ಪಾಠವನ್ನು ನೋಡಿ.

ಮರ, ಕುರಿ, ಬೆಟ್ಟ—ಇವು ರೂಢಿಯಾಗಿ ಬಳಸುವ ಮಾತುಗಳು; ಪದಾರ್ಥಗಳನ್ನು ಸೂಚಿಸುತ್ತವೆ. ಇವುಗಳಿಗೆ 'ರೂಢನಾಮಗಳು' ಎಂದು ಹೆಸರು. ರಘು, ರಾಧೆ, ಗಣೇಶ—ಇವು ಒಬ್ಬರು ಇಟ್ಟ ಹೆಸರುಗಳು. ಇವುಗಳಿಗೆ 'ಅಂಕಿತನಾಮಗಳು' ಎಂದು ಹೆಸರು. (ಅಂಕಿತ ಎಂದರೆ ಗುರುತಿಸಿದ, ಇಟ್ಟ ಎಂದು ಅರ್ಥ.) ಕಿವುಡ, ಮೂಗ, ಕುಂಟ—ಎಂಬ ಪದಗಳು ಆಯಾ ಮನುಷ್ಯನ ಗುಣದೋಷಗಳನ್ನು ಎತ್ತಿ ಹೇಳುತ್ತವೆ. ಇವುಗಳಿಗೆ 'ಅನ್ವರ್ಥನಾಮಗಳು' ಎಂದು ಹೆಸರು.

§ ರೂಢಿಯಲ್ಲಿರುವ ಹೆಸರು 'ರೂಢನಾಮ', ಅರ್ಥಕ್ಕೆ ಅನುಸಾರವಾದ ಹೆಸರು 'ಅನ್ವರ್ಥನಾಮ', ಅವರ ಇಷ್ಟಕ್ಕೆ ಬಂದಂತೆ ಇಟ್ಟುಕೊಂಡ ಹೆಸರು 'ಅಂಕಿತನಾಮ'.

### ಅಭ್ಯಾಸ

(೧) ವಸ್ತುವಾಚಕದಲ್ಲಿ ಎಷ್ಟು ಬಗೆಗಳಿವೆ? ಅವು ಯಾವುವು?

(೨) ಕೆಳಗಿನ ವಾಕ್ಯಗಳಲ್ಲಿ ನಾಮಪದಗಳನ್ನು ಸೇರಿಸಿ:—

೧. — ರಾಜ್ಯವಾಳುತ್ತಾನೆ. ೨ — ಕಾಲಿಲ್ಲ. ೩. — ಕಿವಿ ಕೇಳಿಸುವುದಿಲ್ಲ. ೪. — ಸುಂದರವಾದ ನಗರ. ೫. ದಶರಥನ ಮಗ —.

(೩) ಇಲ್ಲಿ ವಸ್ತುವಾಚಕಗಳನ್ನು ತೋರಿಸಿರಿ:—

ಬೆಂಗಳೂರಿನಲ್ಲಿ ಮಲ್ಲೇಶ್ವರವೆಂಬುದೊಂದು ಭಾಗ. ಅಲ್ಲಿ ಸರ್ಕಾರದ ಕಾರ್ಖಾನೆ ಇದೆ. ಕುರುಬನಿಗೆ ಕುರಿಗಳೆಂದರೆ ಆಸೆ. ಹುಲಿಯು ನಮ್ಮನ್ನು ಕಂಡರೆ ಗರ್ಜಿಸುತ್ತದೆ. ಆನಂದಪುರವೆಂಬುದು ಒಂದು ಹಳ್ಳಿ. ಅಲ್ಲಿ ರಾಮಯ್ಯನೆಂಬ ಪಟೇಲನು ಇದ್ದನು. ಅವನು ಸತ್ಯವಂತನಾಗಿದ್ದನು. ನೀರು ಮೇಲಿಂದ ಧುಮುಕುತ್ತದೆ.

---

## ಪಾಠ ೪

### ಗುಣವಾಚಕ

ವಸ್ತುವಿನ ಗುಣವನ್ನು ತಿಳಿಸುವ ಪದವು '**ಗುಣವಾಚಕ**'

**ಕರಿಯ** ನಾಯಿ. **ದೊಡ್ಡ** ಹಸು.

**ಚಿಕ್ಕ** ಮಗು.

**ಚಿಕ್ಕವರು ಹಿರಿಯರ** ಮಾತನ್ನು ಕೇಳಬೇಕು.

**ಹೊಸಬರನ್ನು** ಕಂಡರೆ ನಾಯಿ ಬೊಗಳುತ್ತದೆ.

ಮೇಲೆ ದಪ್ಪಕ್ಷರಗಳಲ್ಲಿ ಸೂಚಿಸಿರುವಂತೆ ಗುಣವಾಚಕಗಳು ವಿಶೇಷಣಗಳಾಗಿಯೂ, ಸ್ವತಂತ್ರವಾಗಿಯೂ ಪ್ರಯೋಗವಾಗುತ್ತವೆ.

ಇವು ಸಾಮಾನ್ಯವಾಗಿ ನಾಮಪದಗಳ ಹಿಂದೆ ಇರುತ್ತವೆ. ಇವು ಎಲ್ಲ ಲಿಂಗ ವಚನ ವಿಭಕ್ತಿಗಳಲ್ಲಿಯೂ ಒಂದೇ ರೂಪದಲ್ಲಿರುತ್ತವೆ.

ನಾಮಪದದ ಮುಂದೆ ಬಂದಾಗಲೂ, ಸ್ವತಂತ್ರವಾಗಿ ನಿಂತಾಗಲೂ, ಗುಣವಾಚಕಗಳು ಲಿಂಗ ವಚನ ವಿಭಕ್ತಿಗಳಿಗನುಸಾರವಾಗಿ ಬೇರೆಬೇರೆ ರೂಪಗಳನ್ನು ಹೊಂದುತ್ತವೆ.

ಹಣ್ಣು ಹಳೆಯದು. ಸೀತೆ ದೊಡ್ಡವಳು.
ಲಕ್ಷ್ಮಣನು ಕಿರಿಯನು. ಈ ಊರಿಗೆ ನೀವು ಹೊಸಬರು.
ಕಳ್ಳರು ಕೆಟ್ಟವರು.

ಮೇಲೆ ಸೂಚಿಸಿರುವಂತೆ ನಾಮಪದದ ಮುಂದೆಯೂ ಗುಣವಾಚಕವು ಬರುತ್ತದೆ. ಹಾಗೆ ಬಂದಾಗ ಅದು, ಅವು, ಅವಳು, ಅವನು, ಅವರು—ಎಂಬುವುಗಳಲ್ಲೊಂದು ಅದರೊಡನೆ ಸೇರುತ್ತದೆ.

ಅಷ್ಟು, ಎಷ್ಟು, ಇಷ್ಟು—ಎಂಬುವು ಪದಾರ್ಥದ ಪರಿಮಾಣವನ್ನು ಸೂಚಿಸುವ ಗುಣವಾಚಕಗಳು ; ಅಂಥ, ಎಂಥ, ಇಂಥ—ಎಂಬುವು ಪ್ರಕಾರವನ್ನು ಸೂಚಿಸುವ ಗುಣವಾಚಕಗಳು.

## ಅಭ್ಯಾಸ

(೧) ಗುಣವಾಚಕ—ಎಂದರೇನು ?

(೨) ಇಲ್ಲಿ ಗುಣವಾಚಕಗಳನ್ನು ಗುರುತುಮಾಡಿ :—

೧. ಅಂಥವರು ಯಾರಿದ್ದಾರೆ ? ೨. ನನಗೆ ನೀನಿಂಥವನೆಂದು ತಿಳಿದಿದ್ದರೆ ಚೆನ್ನಾಗಿತ್ತು. ೩. ಊರು ಎಷ್ಟು ದೂರದಲ್ಲಿದೆ ? ೪. ಹಲಸಿನ ಹಣ್ಣು ಎಷ್ಟು ರುಚಿಯಾಗಿದೆ ! ೫. ಹಲವರು ಎಂಥವರಿಗೂ ಹೆದರುವುದಿಲ್ಲ. ೬. ಅಷ್ಟರಮಟ್ಟಿಗೆ ಓದಿದರೆ ಸಾಕು.

(೩) ಗೀಟಿರುವ ಕಡೆ ಗುಣವಾಚಕಗಳನ್ನು ಸೇರಿಸಿರಿ :—

೧. ____ ರಾಮನು ____ ರಾವಣನನ್ನು ಕೊಂದನು. ೨. ____ ಹುಡುಗನು ತೇರ್ಗಡೆ ಹೊಂದುವನು. ೩. ____ ಶತ್ರು ಪಟ್ಟಣವನ್ನು ಸುಟ್ಟನು. ೪. ____ ರಾಜರು ಸುಖವಾಗಿ ಆಳಲಿ.

## ಪಾಠ ೫

### ಸಂಖ್ಯಾವಾಚಕ

§ ಅಂಕಿ (ಅಂಕೆ) ಯನ್ನು ಹೇಳುವ ಮಾತಿಗೆ ' ಸಂಖ್ಯಾವಾಚಕ ' ಎಂದು ಹೆಸರು. ಸಂಖ್ಯಾವಾಚಕಗಳು ನಪುಂಸಕಲಿಂಗಕ್ಕೆ ಸೇರಿದುವು. ಅವುಗಳಲ್ಲಿ ' ಒಂದು ' ಎಂಬುದರ ಹೊರತು ಉಳಿದುವೆಲ್ಲಾ ಬಹು ವಚನದ ಮಾತುಗಳು.*

ಕೆಲವು ಸಂಖ್ಯಾವಾಚಕಗಳಿಗೆ ಆಯಾ ಲಿಂಗದಲ್ಲಿ ಬೇರೆ ಬೇರೆ ರೂಪವುಂಟಾಗುವುದು.

ಈ ಸಂಖ್ಯಾವಾಚಕಗಳನ್ನು ನೋಡಿ :—

| ನಪುಂಸಕಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|
| ಒಂದು | ಒಬ್ಬನು | ಒಬ್ಬಳು |
| ಎರಡು | ಇಬ್ಬರು | |
| ಮೂರು | ಮೂವರು | |
| ನಾಲ್ಕು | ನಾಲ್ವರು | |
| ಐದು | ಐವರು | |

ಆದರೆ ಆರು, ಏಳು ಮುಂತಾದುವು ಬಂದಾಗ ' ಮಂದಿ ', ' ಜನ ', ಎಂಬುವುಗಳಲ್ಲೊಂದನ್ನು ಮುಂದೆ ಸೇರಿಸಬೇಕು. ಈ ಶಬ್ದ ಗಳನ್ನು ಮೂರು, ನಾಲ್ಕು, ಐದು—ಇವುಗಳ ಮುಂದೆಯೂ ಸೇರಿಸ ಬಹುದು.

ಇವುಗಳನ್ನು ನೋಡಿ :—

ಎರಡು ಮಂದಿ

ಮೂರು ಮಂದಿ ನಾಲ್ಕು ಜನ

ಹತ್ತು ಮಂದಿ ಹತ್ತು ಜನ

---

* ಒಂದನೆಯ ಭಾಗದ ಹದಿನೈದನೆಯ ಪಾಠವನ್ನು ಓದಿ.

### ಅಭ್ಯಾಸ

(೧) ಸಂಖ್ಯಾವಾಚಕ —— ಎಂದರೇನು ?

(೨) ಈ ವಾಕ್ಯಗಳಲ್ಲಿ ಸಂಖ್ಯಾವಾಚಕಗಳನ್ನು ಗುರುತುಮಾಡಿ :—

೧. ಗುಂಪಿನಲ್ಲಿ ನೂರಾರು ಮಂದಿ ಇದ್ದಾರೆ.
೨. ಅವನಿಗೆ ತಿಂಗಳಿಗೆ ಹತ್ತು ಖಂಡುಗ ಅಕ್ಕಿ ದೊರೆಯುತ್ತದೆ.
೩. ಸಾವಿರ ಜನರು ಇಬ್ಬರಿಗೆ ಸರಿಯೆ ?
೪. ರೂಪಾಯಿಗೆ ಹದಿನಾರಾಣೆ.
೫. ಮಣಕ್ಕೆ ನಲವತ್ತು ಸೇರು.
೬. ಮೈಸೂರಿನಲ್ಲಿ ಒಂದು ಲಕ್ಷ ಜನರಿದ್ದಾರೆ.
೭. ವರ್ಷಕ್ಕೆ ಆರು ಋತುಗಳು.
೮. ಈ ಪುಸ್ತಕದಲ್ಲಿ ಹತ್ತು ಹಾಳೆಗಳೂ ಒಂದು ಹಾಳೆಗೆ ಎರಡು ಪುಟಗಳೂ ಪುಟಕ್ಕೆ ಹದಿನಾರು ಸಾಲುಗಳೂ ಇವೆ.

## ಪಾಠ ೬

### ಭಾವನಾಮ

**ಬರವಣಿಗೆ** ಅಂದವಾಗಿದೆ

**ಕಳ್ಳತನ** ಒಳ್ಳೆಯದಲ್ಲ.

ಮೇಲಿನ ವಾಕ್ಯಗಳಲ್ಲಿ ದಪ್ಪಕ್ಷರಗಳ ಪದಗಳನ್ನು ನೋಡಿ. ಅವು ಕೆಲಸ ನಡೆಯುವುದರಿಂದ ಉಂಟಾಗುವ ಅಥವಾ ವಸ್ತುವಿನಲ್ಲಿ ತೋರುವ ಸ್ಥಿತಿಯನ್ನು ಸೂಚಿಸುವುವು. ಈ ಸ್ಥಿತಿಗೆ 'ಭಾವ' ಎಂದು ಹೆಸರು.

§ ವಸ್ತುವಿನಲ್ಲಿ ತೋರುವ ಅಥವಾ ಕ್ರಿಯೆಯಿಂದುಂಟಾಗುವ ಭಾವವನ್ನು ಸೂಚಿಸುವ ಪದಕ್ಕೆ 'ಭಾವನಾಮ' ಎಂದು ಹೆಸರು.

### ಅಭ್ಯಾಸ

(೧) ಭಾವನಾಮ —— ಎಂದರೇನು ?

(೨) ಇಲ್ಲಿ ಭಾವನಾಮಗಳನ್ನು ಗುರುತುಮಾಡಿ :—

೧. ಹಗೆತನ ಕೆಟ್ಟದ್ದು. ೨. ಹೆಡ್ಡತನ ಒಳ್ಳೆಯದಲ್ಲ. ೩. ಜಗಳ ಮಾಡುವುದು ನೀಚತನ. ೪. ಒಳ್ಳೆಯ ನಡತೆಯಿಂದ ದೊಡ್ಡಸ್ತಿಕೆ ಉಂಟಾಗುತ್ತದೆ. ೫. ಇಂದಿನ ಆಟವೇ ಕೊನೆಯದು.

(೩) ಗೀಟಿರುವ ಕಡೆ ಭಾವನಾಮಗಳನ್ನು ಸೇರಿಸಿ ;—

೧. ಸಂಜೆ ______ ಆಡಬೇಕು. ೨. ರಾವಣನು ತನ್ನ ______ದಿಂದ ಕೆಟ್ಟನು. ೩. ಬಯ್ಯುವುದು ______ . ೪. ಯುದ್ಧದಲ್ಲಿ ______ ವಿರಬೇಕು. ೫. ನಡತೆಯಲ್ಲಿ ______ ಇರಬೇಕು.

### ಪಾಠ ೭

#### ಸರ್ವನಾಮ

| ಏಕ. | ಬಹು. |
|---|---|
| ಭೂತ ... **ನಾನು** ಬಂದೆನು | **ನಾವು** ಬಂದೆವು |
| **ನೀನು** ಬಂದೆ | **ನೀವು** ಬಂದಿರಿ |
| **ಅವನು** ಬಂದನು | **ಅವರು** ಬಂದರು |
| **ಅವಳು** ಬಂದಳು | **ಅವರು** ಬಂದರು |
| **ಅದು** ಬಂದಿತು | **ಅವು** ಬಂದವು |

ಮೇಲೆ ಕಂಡ ವಾಕ್ಯಗಳಲ್ಲಿ ದಪ್ಪಕ್ಷರಗಳ ಪದಗಳನ್ನು ಪರೀಕ್ಷಿಸಿ. ಅವು ನಾಮಪದಗಳಿಗೆ ಬದಲಾಗಿ ನಿಲ್ಲುತ್ತವೆ. ಹೀಗೆ ನಾಮಪದಗಳಿಗೆ ಪ್ರತಿಯಾಗಿ ನಿಲ್ಲತಕ್ಕ ಪದಗಳಿಗೆ ' ಸರ್ವನಾಮಗಳು ' ಎಂದು ಹೆಸರು.

{ಯಾವನು / ಯಾವಳು} ಯಾರು ಯಾವುದು ಯಾವುವು

Interrogative pronouns.

ಈ ಸರ್ವನಾಮಗಳಿಗೆ 'ಪ್ರಶ್ನಾರ್ಥ ಸರ್ವನಾಮಗಳು' ಎಂದು ಹೆಸರು.

{ನಾನು / ನಾವು} {ತಾನು / ತಾವು} {ಅವನು / ಅವಳು / ಅವರು}

{ನೀನು / ನೀವು} {ಅದು / ಅವು} {ಇವನು / ಇವಳು / ಇವರು}

{ಇದು / ಇವು}

ಈ ಸರ್ವನಾಮಗಳಿಗೆ ' ಪುರುಷವಾಚಕ ಸರ್ವನಾಮಗಳು ' ಎಂದು ಹೆಸರು. Personal pronouns.

## ಅಭ್ಯಾಸ

(೧) ಸರ್ವನಾಮ—ಎಂದರೇನು ?

(೨) ಇಲ್ಲಿ ಸರ್ವನಾಮಗಳನ್ನು ಗುರುತುಮಾಡಿ :—

ಅವನ ಕೊಡಲಿ ನೀರಿಗೆ ಬಿದ್ದಿತು. ಅದನ್ನು ಕೊಡೆಂದು ದೇವರನ್ನು ಬೇಡುತ್ತಿದ್ದನು. ನಾನು ಹಳ್ಳಿಗೆ ಹೋದೆನು. ನಿಮ್ಮ ಹಳ್ಳಿ ಯಾವುದು ? ಯಾರಿಂದ ಇಷ್ಟು ತಾಪತ್ರಯವಾಯಿತೋ ಅವನನ್ನು ಈ ಹಳ್ಳಿಗೆ ಕಳುಹಿಸು, ನಮ್ಮ ಪಾಡು ನಮಗೆ, ಅವರ ಪಾಡು ಅವರಿಗೆ.

(೩) ಗೀಟಿರುವ ಸ್ಥಳದಲ್ಲಿ ಸರ್ವನಾಮವನ್ನು ಬರೆಯಿರಿ :—

೧. ಸೀತೆ ರಾಮನ ಹೆಂಡತಿ. ೨. ——— ಕಾಡಿಗೆ ಹೊರಡಲು ——— ಬರುವುದಾಗಿ ಹೇಳಿದಳು. ೩. ——— ರಾವಣನು ಸೆರೆ ಹಿಡಿದನು. ೪. ——— ದುಷ್ಟನಾಗಿದ್ದನು. ೫. ——— ರಾಮನು ಹಿಂದಕ್ಕೆ ಕರೆದುಕೊಂಡು ಹೋದನು.

(೪) ಸರ್ವನಾಮಗಳನ್ನು ಏತಕ್ಕೆ ಉಪಯೋಗಿಸಬೇಕು ?

(೫) ಸರ್ವನಾಮಗಳಲ್ಲಿ ಎಷ್ಟು ವಿಧ ? ಅವು ಯಾವುವು ?

(೬) ಈ ಕೆಳಗಿನ ವಾಕ್ಯಗಳಲ್ಲಿರುವ ಸರ್ವನಾಮಗಳನ್ನು ಗುರುತಿಸಿ ಅವು ಎಂತಹವು ಎಂಬುದನ್ನು ತಿಳಿಸಿ :—

೧. ಅವನ ತಂದೆ ಯಾರು ?
೨. ನಾನು ನಿನ್ನ ಜೊತೆ ಬಟ್ಟೆ.
೩. ಯಾರೂ ನಮ್ಮ ಮನೆಗೆ ಬರಲಿಲ್ಲ.
೪. ಅವಳ ತಾಯಿ ನಮ್ಮ ಅಕ್ಕನಾಗಬೇಕು.
೫. ಇವು ಎಂತಹ ಹಣ್ಣುಗಳು ?
೬. ನಾವು ಹಳ್ಳಿಗೆ ಹೋಗುವೆವು.

---

## ಪಾಠ ೮*

### Root ಪ್ರಕೃತಿ, ಪ್ರತ್ಯಯ Suffix

| | |
|---|---|
| ಹೊಗೆ | ಹೊಗೆಯಿಂದ |
| ಮನೆ | ಮನೆಯಲ್ಲಿ |

ಹೊಗೆ, ಮನೆ ಎಂಬ ಪದಗಳು ಮೂಲರೂಪದಲ್ಲಿವೆ. ಹೀಗೆ ಮೂಲರೂಪದಲ್ಲಿರುವ ಮಾತುಗಳು 'ಪ್ರಕೃತಿ' ಎಂದೆನಿಸಿಕೊಳ್ಳುವುವು.

* ಒಂದನೆಯ ಭಾಗದ ೧೦–೧೩ ಪಾಠಗಳನ್ನು ನೋಡಿ.

ಹೊಗೆಯಿಂದ, ಮನೆಯಲ್ಲಿ—ಈ ಪದಗಳನ್ನು ನೋಡಿ. ಇಂದ, ಅಲ್ಲಿ—ಎಂಬ ಅಕ್ಷರಗಳು ಪ್ರಕೃತಿಯೊಡನೆ ಸೇರಿವೆ. ಇದಕ್ಕೆ 'ಪ್ರತ್ಯಯ' ಎಂದು ಹೆಸರು.

§ ಪ್ರಕೃತಿ, ಪ್ರತ್ಯಯಗಳು ಬೆರೆತಾಗ 'ಪದ' ವಾಗುವುದು.

## ಅಭ್ಯಾಸ

(೧) ಪ್ರಕೃತಿ, ಪ್ರತ್ಯಯ, ಪದ—ಎಂದರೇನು ?

(೨) ಈ ವಾಕ್ಯಗಳಲ್ಲಿರುವ ನಾಮಪದಗಳನ್ನು ಗುರುತಿಸಿ, ಅವುಗಳಲ್ಲಿರುವ ಪ್ರಕೃತಿ, ಪ್ರತ್ಯಯಗಳನ್ನು ಬೇರೆ ಮಾಡಿ :—

೧. ಒಂದೂರಿನಲ್ಲಿ ತಿಮ್ಮನೆಂಬ ಒಕ್ಕಲಿಗನಿದ್ದನು. ೨. ಆಕಾಶದಲ್ಲಿ ವಿಮಾನವು ಹಾರುತ್ತದೆ. ಅವನಿಂದ ಎಲ್ಲರೂ ದುಃಖವನ್ನು ಹೊಂದಿದರು. ೪. ನನಗೆ ಆ ಹೆಸರೇ ಸಾಕು. ೫. ಅವನಿಗೇನು ೬. ಅವನನ್ನು ಎಲ್ಲರೂ ಹಾಸ್ಯಮಾಡುತ್ತಿದ್ದರು.

---

## ಪಾಠ ೯

### ವಿಭಕ್ತಿ

| | | | | | |
|---|---|---|---|---|---|
| ೧ | ರಾಮನು | ರಾಮರು | ೨ | ಮಗಳು | ಮಕ್ಕಳು |
| | ಕೃಷ್ಣ | ಕೃಷ್ಣರು | | ಅವಳು | ಅವರು |
| | ಅವನು | ಅವರು | ೩ | ಇಲಿ | ಇಲಿಗಳು |
| | | | | ಕುರಿ | ಕುರಿಗಳು |

ಹೀಗೆ ಲಿಂಗ, ವಚನಗಳನ್ನು ತೋರಿಸುವುದಕ್ಕಾಗಿ ನಾಮಪದಗಳಿಗೆ ಪ್ರತ್ಯಯಗಳನ್ನು ಸೇರಿಸುವುದನ್ನು ನೀವು ಮೊದಲನೆಯ ಭಾಗದಲ್ಲಿ ಓದಿದ್ದೀರಿ.

| ಪುಲ್ಲಿಂಗ | ಸ್ತ್ರೀಲಿಂಗ | ನಪುಂಸಕಲಿಂಗ |
|---|---|---|
| ರಾಮನು ಬಂದನು | ಸೀತೆ ಬಂದಳು | ಮರವು ಬೆಳೆದಿದೆ |
| ರಾಮನನ್ನು ಕರೆ | ಸೀತೆಯನ್ನು ಕರೆ | ಮರವನ್ನು ಕಡಿ |
| ರಾಮನಿಂದ ಹಣ್ಣು ತೆಗೆದುಕೋ | ಸೀತೆಯಿಂದ ಹಣ್ಣು ತೆಗೆದುಕೋ | ಮರದಿಂದ ಮನೆ ಮಾಡು |
| ರಾಮನಿಗೆ ನೀರುಕೊಡು | ಸೀತೆಗೆ ನೀರು ಕೊಡು | ಮರಕ್ಕೆ ನೀರು ಹಾಕು |
| ರಾಮನ ಮಗ ಲವ | ಸೀತೆಯ ಮಗ ಕುಶ | ಮರದ ಹಣ್ಣು ರುಚಿ |
| ರಾಮನಲ್ಲಿ ನನಗೆ ಪ್ರೀತಿ | ಸೀತೆಯಲ್ಲಿ ನನಗೆ ಭಕ್ತಿ | ಮರದಲ್ಲಿ ಹೂವಿದೆ |

ಈ ವಾಕ್ಯಗಳಲ್ಲಿ ರಾಮ, ಸೀತೆ, ಮರ—ಈ ನಾಮಪದಗಳಿಗೆ ಮತ್ತೊಂದು ಪದದೊಡನೆ ಇರುವ ಸಂಬಂಧವನ್ನು ತೋರಿಸುವುದಕ್ಕಾಗಿ ಪ್ರತ್ಯಯಗಳನ್ನು ಹಚ್ಚಿದೆ. ಇವುಗಳಿಂದ ನಾಮಪದದ ರೂಪ ವ್ಯತ್ಯಾಸವಾಗುವುದು. ಇವುಗಳಿಗೆ 'ವಿಭಕ್ತಿ ಪ್ರತ್ಯಯಗಳು' ಎಂದು ಹೆಸರು.

ಇವಾವುವೆಂದರೆ :—

ಪ್ರಥಮಾ—ಉ. ದ್ವಿತೀಯಾ—ಅನ್ನು. ತೃತಿಯಾ—ಇಂದ.
ಚತುರ್ಥೀ—ಗೆ, ಕ್ಕೆ. ಷಷ್ಠೀ—ಅ. ಸಪ್ತಮೀ—ಅಲ್ಲಿ.

ಈ ಪ್ರತ್ಯಯಗಳು ಪುಲ್ಲಿಂಗ ಪದಗಳಿಗೂ ಸ್ತ್ರೀಲಿಂಗ ಪದಗಳಿಗೂ ನಪುಂಸಕಲಿಂಗ ಪದಗಳಿಗೂ ಒಂದೇ ಆಗಿವೆ.

| | Masc<br>ಪುಲ್ಲಿಂಗ | Fem.<br>ಸ್ತ್ರೀಲಿಂಗ | Neut.<br>ನಪುಂಸಕಲಿಂಗ |
|---|---|---|---|
| 'ಉ' | ಅಣ್ಣಂದಿರು | ತಂಗಿಯರು | ಗಿಡಗಳು |
| 'ಅನ್ನು' | ಅಣ್ಣಂದಿರನ್ನು | ತಂಗಿಯರನ್ನು | ಗಿಡಗಳನ್ನು |
| 'ಇಂದ' | ಅಣ್ಣಂದಿರಿಂದ | ತಂಗಿಯರಿಂದ | ಗಿಡಗಳಿಂದ |
| 'ಗೆ' | ಅಣ್ಣಂದಿರಿಗೆ | ತಂಗಿಯರಿಗೆ | ಗಿಡಗಳಿಗೆ |
| 'ಅ' | ಅಣ್ಣಂದಿರ | ತಂಗಿಯರ | ಗಿಡಗಳ |
| 'ಅಲ್ಲಿ' | ಅಣ್ಣಂದಿರಲ್ಲಿ | ತಂಗಿಯರಲ್ಲಿ | ಗಿಡಗಳಲ್ಲಿ |

## ಅಭ್ಯಾಸ

(೧) ಈ ವಾಕ್ಯಗಳಲ್ಲಿ ನಾಮಪದಗಳು ಯಾವ ವಿಭಕ್ತಿಗಳಲ್ಲಿವೆ :—

೧. ಮೈಸೂರಿನ ಎರಡನೆಯ ಯುದ್ಧವು ಬಹಳ ದಿನಗಳ ಹಿಂದೆ ನಡೆಯಿತು ೨. ಸುಲ್ತಾನರು ಸ್ವರ್ಗಸ್ಥರಾದರು. ೩. ಅವರಲ್ಲಿ ನನಗೆ ಗೌರವವಿದೆ. ೪. ನಿನಗೇಕೆ ನನ್ನ ವಿಚಾರ? ೫. ರಾಮನೇ ನನ್ನ ಪುಸ್ತಕವನ್ನು ಹರಿದವನು. ೬. ರಾಜದ್ರೋಹಿಗಳಿಗೆ ನರಕದಲ್ಲಿ ಕೂಡ ಸ್ಥಳವಿಲ್ಲ.

(೨) ಗೀಟಿರುವ ಕಡೆ ಪ್ರತ್ಯಯವನ್ನು ಸೇರಿಸಿ :—

೧. ಗೂಡಿನ — ಹಕ್ಕಿ ಇದೆ. ೨. ರಾಮು — ಬಂದನು. ೩. ಹಸು — ಹೊಡೆಯಬೇಡ. ೪. ಹುಲಿ — ಕಂಡರೆ ಭಯ. ೫. ನೀನು ರಾಮು — ಅಣ್ಣ — ಮಗನಲ್ಲವೇ ?

---

## ಪಾಠ ೧೦

### ಅವ್ಯಯ

ಲಿಂಗ, ವಚನ, ವಿಭಕ್ತಿಗಳಲ್ಲಿ ಯಾವ ಬದಲಾವಣೆಯನ್ನೂ ಹೊಂದದೆ ಒಂದೇ ರೀತಿಯಾಗಿರುವ ಪದಕ್ಕೆ 'ಅವ್ಯಯ' ಎಂದು ಹೆಸರು. ಅವ್ಯಯಗಳ ವಿಷಯವನ್ನು ಮೊದಲನೆ ಭಾಗದಲ್ಲಿಯೇ ನೀವು ಓದಿರುವಿರಿ.

೧ ನನಗೆ ಹಣ್ಣು **ಬೇಕು.** ಅವನಿಗೆ ಔಷಧಿ **ಬೇಡ.**
ಇಲ್ಲಿ ಪುಸ್ತಕ **ಇಲ್ಲ.** ಇದು ನನ್ನ ಟೋಪಿ **ಅಲ್ಲ.**
ನನಗೆ ಒಂದೇ ಹಣ್ಣು **ಸಾಕು.**

ಇಲ್ಲಿ ದಪ್ಪಕ್ಷರಗಳ ಪದಗಳು ಕ್ರಿಯೆಯ ಅರ್ಥವನ್ನೇ ಕೊಡುತ್ತವೆ. ಇವು ಕ್ರಿಯೆಯ ಅರ್ಥವನ್ನು ಸಂಪೂರ್ಣವಾಗಿ ತಿಳಿಸುವ ಅವ್ಯಯಗಳು.

೨ ರಾಮನು ಇಲ್ಲಿಗೆ **ಬಂದು** ಹೋದನು.
ಅವನು ಕಷ್ಟವನ್ನು **ಹೇಳಿ** ಹೋದನು.
ಅಪ್ಪನು ಪುಸ್ತಕವನ್ನು **ಓದಿ** ಅರ್ಥವನ್ನು ಹೇಳಿದನು.

ಈ ವಾಕ್ಯಗಳಲ್ಲಿರುವ ಬಂದು, ಹೇಳಿ, ಓದಿ—ಎಂಬ ಪದಗಳು ರೂಪದಲ್ಲಿ ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಅವು ಕ್ರಿಯೆಯ ಅರ್ಥವನ್ನು ತಿಳಿಸಿದರೂ ವಾಕ್ಯವನ್ನು ಪೂರೈಸುವುದಿಲ್ಲ; ವಾಕ್ಯದ ಕೊನೆಯಲ್ಲಿರುವ ಕ್ರಿಯಾಪದದ ಸಹಾಯದಿಂದ ಅರ್ಥವು ಮನಸ್ಸಿಗೆ ಸಂಪೂರ್ಣವಾಗಿ ತಿಳಿಯುವಂತೆ ಮಾಡುತ್ತವೆ. ಇವೂ ಒಂದು ಬಗೆಯ ಅವ್ಯಯಗಳು.

೩ ಗಿಡದ **ಸುತ್ತಲೂ** ಮುಳ್ಳುಗಳಿವೆ.
ಮಗು **ಸುಮ್ಮನೆ** ಕುಳಿತಿದೆ.
ಹುಡುಗರು **ಗಟ್ಟಿಯಾಗಿ** ಓದುತ್ತಾರೆ.
ಹಾವು **ಬೇಗನೆ** ಹರಿಯುತ್ತದೆ.
ಮಂಜು ಹಾಲಿನ **ಹಾಗೆ** ಬೆಳ್ಳಗಿದೆ.
ಅವನು **ಫಕ್ಕನೆ** ನಕ್ಕುಬಿಟ್ಟನು.
ಬೆಂಕಿ **ಧಗಧಗನೆ** ಉರಿಯುತ್ತಿದೆ.

ಇಲ್ಲಿ ದಪ್ಪಕ್ಷರ ಪದಗಳು ಯಾವ ಬದಲಾವಣೆಯನ್ನೂ ಹೊಂದದೆ, ಕ್ರಿಯೆಯ ರೀತಿಯನ್ನೂ ಅರ್ಥವನ್ನೂ ಸ್ಪಷ್ಟಪಡಿಸುವುವು. Adv. ಇವೂ ಅವ್ಯಯಗಳು.

೪ ಅವನು ಓದುತ್ತಾನೆ, **ಆದರೆ** ಮಾತುಗಳ ಅರ್ಥವೇ ಅವನಿಗೆ ತಿಳಿಯದು.
ನೀನು ಹೋಗು, **ಅಥವಾ** ನಿನ್ನ ತಮ್ಮನನ್ನು ಕಳುಹಿಸು.
ರಾಮು **ಮತ್ತು** ಕೃಷ್ಣ ಇಬ್ಬರೂ ಓಡಲಿ.
ಕಷ್ಟಗಳು ಬರುತ್ತವೆ, **ಆದರೂ** ಕೆಲಸ ನಡೆಯುತ್ತದೆ.
ಸಹಾಯಕ್ಕೆ ಒದಗುವವರೇ ಸ್ನೇಹಿತರು. **ಆದುದರಿಂದ** ಸ್ನೇಹಿತರನ್ನು ಸಂಪಾದಿಸಬೇಕು.

ಇಲ್ಲಿ ದಪ್ಪಕ್ಷರಗಳ ಪದಗಳು ಎರಡು ವಾಕ್ಯಗಳ ಸಂಬಂಧವನ್ನು Conjn ಸೂಚಿಸಿ, ಅವನ್ನು ಒಟ್ಟಿಗೆ ಸೇರಿಸುತ್ತವೆ. ಇವು ರೂಪ ವ್ಯತ್ಯಾಸವನ್ನು ಹೊಂದುವುದಿಲ್ಲ. ಇವೂ ಒಂದು ಬಗೆಯ ಅವ್ಯಯಗಳು.

೫ **ಅಯ್ಯೋ!** ಇನ್ನೇನು ಗತಿ?
**ಭಲಾ!** ನೀನೆ ಸಾಹಸಿ.
**ಛೀ!** ಎಷ್ಟು ಹೇಳಿದರೂ ತಪ್ಪುಗಳನ್ನು ಮಾಡುತ್ತೀಯೆ.
**ಓಹೋ!** ಬಹಳ ಸಂತೋಷದ ಸುದ್ದಿ.
**ಆಹಾ!** ಏನಿದು? ಹಗಲು ಬೆಳದಿಂಗಳೇ?

ಇಲ್ಲಿ ದಪ್ಪಕ್ಷರಗಳ ಪದಗಳು ಮಾತನ್ನು ಆಡುವವರ ಮನಸ್ಸಿನಲ್ಲಿ Interj. ರುವ ಭಾವವನ್ನು ಸೂಚಿಸುತ್ತದೆ. ಇವು ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಇವೂ ಅವ್ಯಯಗಳು.

## ಅಭ್ಯಾಸ

(೧) ಅವ್ಯಯ, ನಾಮಪದ — ಇವುಗಳಿಗಿರುವ ವ್ಯತ್ಯಾಸವನ್ನು ತಿಳಿಸಿ.

(೨) ಇಲ್ಲಿ ನಾಮಪದಗಳನ್ನೂ ಅವ್ಯಯಗಳನ್ನೂ ಗುರುತಿಸಿ :—

೧ ತಂದೆಯಂತೆ ಅಣ್ಣನೂ ಹಿರಿಯನು.
೨ ಮೆಲ್ಲನೆ ಬಾ, ಕತ್ತಲು ಹೆಚ್ಚಾಗಿದೆ.
೩ ನಾನು ಸರ್ಪನ ಓಡಿದೆನು.
೪ ನಾವೈವರಲ್ಲದೆ ನಮ್ಮಣ್ಣನೂ ಇದ್ದಾನೆ.
೫ ನೆಟ್ಟನೆ ನಿಂತು ಮಾತಾಡು.
೬ ಸುಮ್ಮನಿರಬೇಡ, ಪುನಾದರೂ ಓದು.

---

## ಪಾಠ ೧೧

### ಕ್ರಿಯಾಪದ — ಪ್ರತ್ಯಯಗಳು

ಹುಡುಗನು **ಓದುತ್ತಾನೆ**. ಮಗು **ಆಡುತ್ತದೆ**.
ಹುಡುಗಿ ಕೆಲಸ **ಮಾಡುತ್ತಾಳೆ**. ರೈತನು ಹೊಲವನ್ನು **ಉಳುತ್ತಾನೆ**.
ನಾಯಿ **ಓಡುತ್ತದೆ**. ಹಕ್ಕಿ **ಹಾರುತ್ತದೆ**.

ಈ ವಾಕ್ಯಗಳಲ್ಲಿ ದಪ್ಪಕ್ಷರಗಳಲ್ಲಿರುವ ಓದುತ್ತಾನೆ, ಆಡುತ್ತದೆ, ಮಾಡುತ್ತಾಳೆ, ಉಳುತ್ತಾನೆ, ಓಡುತ್ತದೆ, ಹಾರುತ್ತದೆ—ಎಂಬ ಪದಗಳು ಹುಡುಗನು, ಮಗುವು, ಹುಡುಗಿ, ರೈತನು, ನಾಯಿ, ಹಕ್ಕಿ—ಇವು ಮಾಡುತ್ತಿರುವ ಕೆಲಸವನ್ನು ಸೂಚಿಸುತ್ತವೆ. ಇಲ್ಲಿ ಹುಡುಗ, ಹಕ್ಕಿ ಮುಂತಾದುವು ಕರ್ತೃಪದಗಳೆಂದು ನಿಮಗೆ ಗೊತ್ತಿದೆ. ಹೀಗೆ ಕರ್ತೃವಿನಿಂದ ನಡೆಯುವ ಕೆಲಸವನ್ನು ತಿಳಿಸುವ ಪದಕ್ಕೆ ' ಕ್ರಿಯಾಪದ ' ಎಂದು ಹೆಸರು.

ಮೇಲಿನ ವಾಕ್ಯಗಳಲ್ಲಿ ಕ್ರಿಯಾಪದಗಳ ರೂಪಗಳು ಒಂದೇ ಸಮನಾಗಿಲ್ಲ. ಈ ರೂಪಗಳ ವ್ಯತ್ಯಾಸಕ್ಕೆ ಕಾರಣವಾದ ಪ್ರತ್ಯಯಗಳನ್ನು ತೆಗೆದುಹಾಕಿದ ಮೇಲೆ ಉಳಿಯುವ ರೂಪವೇ ' ಧಾತು ' ಎಂಬುದು. ಕ್ರಿಯಾಪದದ ಮೂಲರೂಪವೇ ಧಾತು. ಈ ಧಾತುವಿನ ಮುಂದೆಯೇ ಪ್ರತ್ಯಯಗಳು ಸೇರುವುವು. ಇವಕ್ಕೆ ' ಆಖ್ಯಾತ ಪ್ರತ್ಯಯಗಳು ' ಎಂದು ಹೆಸರು.

## ಅಭ್ಯಾಸ

(೧) ಕ್ರಿಯಾಪದ, ಧಾತು — ಇವುಗಳಿಗೇನು ವ್ಯತ್ಯಾಸ?

(೨) ಈ ವಾಕ್ಯಗಳ ಕ್ರಿಯಾಪದಗಳಲ್ಲಿರುವ ಧಾತುಗಳನ್ನು ಬಿಡಿಸಿ ಬರೆಯಿರಿ :—

೧ ನಕ್ಷತ್ರವು ಮಿನುಗುತ್ತದೆ.
೨ ಬಿಸಿಲಿನಲ್ಲಿ ಶಾಖವು ಹೆಚ್ಚಾಗಿದೆ.
೩ ನಿನ್ನ ಕಾಲನ್ನು ಮುರಿಯುತ್ತಾನೆ.
೪ ದೀಪವು ಕತ್ತಲೆಯನ್ನು ಹೋಗಲಾಡಿಸುವುದು.
೫ ನಾಯಿ ಬೊಗಳುತ್ತದೆ.

---

## ಪಾಠ ೧೨

### Transitive ಸಕರ್ಮಕ, ಅಕರ್ಮಕ Intransitive

೧ ರಾಮನು ಓಡುತ್ತಾನೆ. ೨ ಅದನ್ನು ಮುಟ್ಟಬೇಡ.
ಹಕ್ಕಿ ಹಾರಿತು. ಮರವನ್ನು ಹತ್ತು.

ಮೊದಲನೆಯ ಗುಂಪಿನಲ್ಲಿರುವ ಓಡು, ಹಾರು ಎಂಬ ಧಾತುಗಳು ಕರ್ಮಪದವನ್ನು ಬಯಸುವುದಿಲ್ಲ. ಎರಡನೆಯ ಗುಂಪಿನಲ್ಲಿರುವ ಮುಟ್ಟು, ಹತ್ತು ಎಂಬ ಧಾತುಗಳು ಕರ್ಮಪದವಿಲ್ಲದೆ ಸಂಪೂರ್ಣವಾದ ಅರ್ಥವನ್ನು ಕೊಡಲಾರವು.

ಕರ್ಮಪದವನ್ನಪೇಕ್ಷಿಸದ ಧಾತುವಿಗೆ 'ಅಕರ್ಮಕ ಧಾತು' ಎಂದೂ, ಕರ್ಮಪದದ ಸಹಾಯವಿಲ್ಲದೆ ಸಂಪೂರ್ಣವಾದ ಅರ್ಥವನ್ನು ಕೊಡಲಾರದ ಧಾತುವಿಗೆ 'ಸಕರ್ಮಕ ಧಾತು' ಎಂದೂ ಹೆಸರು.

೧ ರಾಮನು ಓಡಿದನು. ೨ ರಾಮನು ಮಗುವನ್ನು ಓಡಿಸಿದನು.
ಮಗು ಆಡುತ್ತದೆ. ದಾದಿಯು ಮಗುವನ್ನು ಆಡಿಸುತ್ತಾಳೆ.
ಹಕ್ಕಿ ಹಾರುತ್ತದೆ. ರಾಮನು ಹಕ್ಕಿಯನ್ನು ಹಾರಿಸುತ್ತಾನೆ.
ಗಿಡವು ಬೆಳೆಯುತ್ತದೆ. ರೈತನು ಗಿಡವನ್ನು ಬೆಳೆಯಿಸುತ್ತಾನೆ.

ಮೊದಲನೆಯ ಗುಂಪಿನ ವಾಕ್ಯಗಳಲ್ಲಿರುವ ಓಡಿದನು, ಆಡುತ್ತದೆ, ಹಾರುತ್ತದೆ, ಬೆಳೆಯುತ್ತದೆ — ಎಂಬ ಕ್ರಿಯಾಪದಗಳು ಅಕರ್ಮಕ ಕ್ರಿಯಾಪದಗಳು. ಎಂದರೆ, ಅಕರ್ಮಕ ಧಾತುವಿಗೆ ಆಖ್ಯಾತ ಪ್ರತ್ಯಯವನ್ನು ಸೇರಿಸಿದ್ದರಿಂದ ಆದ ರೂಪಗಳು. ಆದರೆ ಎರಡನೆಯ

ಗುಂಪಿನಲ್ಲಿರುವ ಓಡಿಸಿದನು, ಆಡಿಸುತ್ತಾಳೆ, ಹಾರಿಸುತ್ತಾನೆ, ಬೆಳೆಯಿಸುತ್ತಾನೆ — ಎಂಬ ಕ್ರಿಯಾಪದಗಳು ಸಕರ್ಮಕ ಕ್ರಿಯಾಪದಗಳು ; ಈ ಕ್ರಿಯಾಪದಗಳ ಧಾತುಗಳು ಮೊದಲನೆಯ ಗುಂಪಿನಲ್ಲಿರುವ ಅಕರ್ಮಕ ಧಾತುಗಳಿಗೆ 'ಇಸು' ಎಂಬ ಪ್ರತ್ಯಯವನ್ನು ಸೇರಿಸಿದುದರಿಂದ ಉಂಟಾದುವು.

ಹೀಗೆ ಅಕರ್ಮಕ ಧಾತುಗಳಿಗೆ 'ಇಸು' ಪ್ರತ್ಯಯವನ್ನು ಸೇರಿಸಿದರೆ ಸಕರ್ಮಕ ಧಾತುಗಳಾಗುತ್ತವೆ.

### ಅಭ್ಯಾಸ

(೧) ಧಾತುಗಳು ಎಷ್ಟು ವಿಧ ?

(೨) ಈ ವಾಕ್ಯಗಳಲ್ಲಿರುವ ಧಾತುಗಳು ಯಾವ ಬಗೆಯವೆಂಬುವನ್ನು ತಿಳಿಸಿ :—

೧. ಅವನು ಹಸುವನ್ನು ಸಾಕುತ್ತಾನೆ. ೨. ಮಠಕ್ಕೆ ಹೋಗು. ೩. ಹಾಡು ಹೇಳಿಸುವಂತೆ ಹೇಳಿದನು. ೪. ಆಳು ಮನೆಯನ್ನು ಗುಡಿಸಿದನು. ೫. ಹಣ್ಣು ಬಿಡಿಸಿ ಸಿಪ್ಪೆಯನ್ನು ಬಿಸಾಡು.

(೩) ಗೀಟಿರುವ ಕಡೆ ಸರಿಯಾದ ಕ್ರಿಯಾಪದವನ್ನು ಸೇರಿಸಿ :—

೧. ಶಾಲೆ — . ೨. ನಾನು ಮನೆಯಲ್ಲಿ — . ೩. ರಾಮುನು ಊಟವನ್ನು — . ೪. ನಾನು ನೀರನ್ನು — . ೫. ಅರ್ಚಕನು ದೇವರನ್ನು — . ೬. ಅವನು ತಾಯಿಯನ್ನು — . ೭. ನಾನು ಅಜ್ಜಿಯನ್ನು — .

---

## ಪಾಠ ೧೩

### ಕ್ರಿಯಾಪದ

### ಆಖ್ಯಾತ ಪ್ರತ್ಯಯಗಳು

| | | |
|---|---|---|
| ವರ್ತಮಾನಕಾಲ: | ನಾನು **ಮಾಡುತ್ತೇನೆ.** | ನಾವು **ಮಾಡುತ್ತೇವೆ.** |
| | ನೀನು **ಮಾಡುತ್ತೀಯೆ.** | ನೀವು **ಮಾಡುತ್ತೀರಿ.** |
| | ಅವನು **ಮಾಡುತ್ತಾನೆ.** | ಅವರು **ಮಾಡುತ್ತಾರೆ.** |
| | ಅವಳು **ಮಾಡುತ್ತಾಳೆ.** | ಅವರು **ಮಾಡುತ್ತಾರೆ.** |
| | ಅದು **ಮಾಡುತ್ತದೆ.** | ಅವು **ಮಾಡುತ್ತವೆ.** |

ಮೇಲೆ ಕೊಟ್ಟಿರುವ ವಾಕ್ಯಗಳಲ್ಲಿ 'ಮಾಡು' ಎಂಬ ಒಂದೇ ಧಾತುವಿನ ಮೇಲೆ ಪ್ರತ್ಯಯಗಳು ಸೇರಿ ಕ್ರಿಯಾಪದಗಳು ರೂಪದಲ್ಲಿ

ವ್ಯತ್ಯಾಸವನ್ನು ಹೊಂದಿವೆ ; ಈ ವ್ಯತ್ಯಾಸವು ಕ್ರಿಯಾಪದದ ಹಿಂದಿರುವ ಕರ್ತೃಪದಕ್ಕೆ ತಕ್ಕಂತೆ ಆಗುತ್ತಿದೆ. 'ನಾನು' ಎಂಬುದು ಕರ್ತೃವಾದಾಗ ಕ್ರಿಯಾಪದದ ರೂಪವು 'ಮಾಡುತ್ತೇನೆ' ಎಂದು ಆಗುತ್ತದೆ. 'ಅವನು' ಎಂಬುದು ಕರ್ತೃವಾದಾಗ 'ಮಾಡುತ್ತಾನೆ' ಎಂದಾಗುತ್ತದೆ. ಆದರೆ 'ಅವಳು' ಎಂಬುದು ಕರ್ತೃವಾದಾಗ 'ಮಾಡುತ್ತಾಳೆ' ಎಂಬ ಕ್ರಿಯಾಪದದ ರೂಪವು ಬರುತ್ತದೆ. 'ಅದು' ಎಂಬುದು ಕರ್ತೃವಾದರೆ, ಕ್ರಿಯಾಪದವು 'ಮಾಡುತ್ತದೆ' ಎಂದಾಗುತ್ತದೆ. ಹೀಗೆ ಕರ್ತೃಪದವು ಬದಲಾಯಿಸಿದ ಹಾಗೆಲ್ಲಾ ಕ್ರಿಯಾಪದದ ರೂಪವು ಬದಲಾಯಿಸುತ್ತದೆ.

## ಲಿಂಗ gender

ಕರ್ತೃಪದವು 'ಅವನು' ಎಂಬುದರಂತೆ ಪುಲ್ಲಿಂಗವಾಗಿದ್ದರೆ ಕ್ರಿಯಾಪದವು 'ಮಾಡುತ್ತಾನೆ' ಎಂಬ ಪುಲ್ಲಿಂಗದ ರೂಪವನ್ನು ಪಡೆಯುವುದು. 'ಅವಳು' ಎಂಬ ಸ್ತ್ರೀಲಿಂಗ ಪದವು ಕರ್ತೃವಾಗಿದ್ದರೆ, 'ಮಾಡುತ್ತಾಳೆ' ಎಂದು ಕ್ರಿಯಾಪದದ ರೂಪವು ಬದಲಾವಣೆಯನ್ನು ಹೊಂದುವುದು. ಹೀಗೆಯೇ ನಪುಂಸಕಲಿಂಗದ 'ಅದು' ಎಂಬುದು ಕರ್ತೃವಾದಾಗ ಕ್ರಿಯಾಪದದ ರೂಪವು 'ಮಾಡುತ್ತದೆ' ಎಂದಾಗುವುದು.

**ಇದರಿಂದ, ಕ್ರಿಯಾಪದವು ಕರ್ತೃಪದವು ಯಾವ ಲಿಂಗದಲ್ಲಿರುವುದೋ ಅದೇ ಲಿಂಗದಲ್ಲಿರುವುದೆಂಬುದು ಸ್ಪಷ್ಟವಾಗುತ್ತದೆ.**

## ವಚನ Number

ಹೀಗೆಯೇ ಕರ್ತೃವಿನ ವಚನವೇ ಕ್ರಿಯಾಪದದಲ್ಲಿಯೂ ಕಂಡುಬರುವುದು.

| ಏಕವಚನ | ಬಹುವಚನ |
|---|---|
| ನಾನು ಮಾಡುತ್ತೇನೆ. | ನಾವು ಮಾಡುತ್ತೇವೆ. |
| ನೀನು ಮಾಡುತ್ತೀಯೆ. | ನೀವು ಮಾಡುತ್ತೀರಿ. |
| ಅವನು ಮಾಡುತ್ತಾನೆ. | ಅವರು ಮಾಡುತ್ತಾರೆ. |
| ಅವಳು ಮಾಡುತ್ತಾಳೆ. | ಅವರು ಮಾಡುತ್ತಾರೆ. |
| ಅದು ಮಾಡುತ್ತದೆ. | ಅವು ಮಾಡುತ್ತವೆ. |

ಕರ್ತೃವು ಏಕವಚನದಲ್ಲಿದ್ದರೆ ಕ್ರಿಯಾಪದವೂ ಏಕವಚನದಲ್ಲಿಯೇ ನಿಲ್ಲುವುದು. ಕರ್ತೃವು ಬಹುವಚನದಲ್ಲಿದ್ದರೆ ಕ್ರಿಯಾಪದವೂ ಬಹುವಚನದಲ್ಲಿ ನಿಲ್ಲುವುದು.

---

## ಪಾಠ ೧೪.

### ಆಖ್ಯಾತ ಪ್ರತ್ಯಯಗಳು.

### ವರ್ತಮಾನಕಾಲ

ಕರ್ತೃಪದದ ಲಿಂಗ ವಚನಗಳೇ ಕ್ರಿಯಾಪದಕ್ಕೂ ಬರುತ್ತವೆಂದು ಮೇಲೆ ಹೇಳಿದೆ. 'ನಾನು', 'ನೀನು', 'ಅವನು', 'ಅವಳು', 'ಅದು', 'ನಾವು', 'ನೀವು', 'ಅವರು', 'ಅವು', ಎಂಬುವು ಕರ್ತೃಪದಗಳಾದಾಗ ಕ್ರಿಯಾಪದದ ರೂಪಗಳು ಬದಲಾಯಿಸಿದುದನ್ನು ನೀವು ನೋಡಿದ್ದೀರಿ.

| | |
|---|---|
| ನಾನು ಓದುತ್ತೇನೆ. | ನಾವು ಓದುತ್ತೇವೆ. |
| ನೀನು ಓದುತ್ತೀಯೆ. | ನೀವು ಓದುತ್ತೀರಿ. |
| ಅವನು ಓದುತ್ತಾನೆ. | ಅವರು ಓದುತ್ತಾರೆ. |
| ಅವಳು ಓದುತ್ತಾಳೆ. | ಅವರು ಓದುತ್ತಾರೆ. |
| ಅದು ಓದುತ್ತದೆ. | ಅವು ಓದುತ್ತವೆ. |

ಇಲ್ಲಿ ಓದುತ್ತೇನೆ, ಓದುತ್ತೇವೆ ಮುಂತಾದ ಕ್ರಿಯಾಪದಗಳನ್ನು ನೋಡಿದರೆ ನಾನು ಎಂಬುದು ಕರ್ತೃವಾದಾಗ ಏನೆ ಎಂಬುದು ಕ್ರಿಯಾಪದದ ಕೊನೆಯಲ್ಲಿ ಕಂಡುಬರುವುದು. ನಾವು ಎಂಬುದು ಕರ್ತೃವಾದಾಗ ಏವೆ ಎಂಬುದು ಕ್ರಿಯಾಪದದ ಕೊನೆಯಲ್ಲಿ ಕಂಡುಬರುವುದು.

| ಕರ್ತೃ | ಕ್ರಿಯೆಯ ಕೊನೆಯಲ್ಲಿ ಕಂಡುಬರುವುದು |
|---|---|
| ನಾನು | ಏನೆ |
| ನಾವು | ಏವೆ |
| ನೀನು | ಈಯೆ |
| ನೀವು | ಈರಿ |
| ಅವನು | ಆನೆ |
| ಅವಳು | ಆಳೆ |
| ಅವರು | ಆರೆ |
| ಅದು | ಅದೆ |
| ಅವು | ಅವೆ |

ಹೀಗೆ ಕರ್ತೃಪದಕ್ಕೆ ತಕ್ಕಂತೆ ಕ್ರಿಯಾಪದದ ಕೊನೆಯಲ್ಲಿ ಬದಲಾವಣೆಗಳಾಗುತ್ತವೆ. ಹೀಗೆ ಕ್ರಿಯಾಪದದ ಕೊನೆಯಲ್ಲಿ ಕರ್ತೃಪದವು ಬದಲಾಯಿಸಿದ ಹಾಗೆಲ್ಲಾ ಬದಲಾವಣೆಯನ್ನು ಹೊಂದುವ ಏನೆ, ಏವೆ, ಈಯೆ, ಈರಿ, ಆನೆ, ಆಳೆ, ಆರೆ, ಅದೆ, ಅವೆ—ಇವುಗಳಿಗೆ "ಆಖ್ಯಾತ ಪ್ರತ್ಯಯಗಳು" ಎಂದು ಹೆಸರು.

## ಕಾಲಸೂಚಕ ಪ್ರತ್ಯಯಗಳು

### ವರ್ತಮಾನಕಾಲ

| ಏಕವಚನ | ಬಹುವಚನ |
|---|---|
| ನಾನು ಆಡುತ್ತೇನೆ | ನಾವು ಆಡುತ್ತೇವೆ |
| ನೀನು ಆಡುತ್ತೀಯೆ | ನೀವು ಆಡುತ್ತೀರಿ |
| ಅವನು ಆಡುತ್ತಾನೆ | ಅವರು ಆಡುತ್ತಾರೆ |
| ಅವಳು ಆಡುತ್ತಾಳೆ | ಅವರು ಆಡುತ್ತಾರೆ |
| ಅದು ಆಡುತ್ತದೆ | ಅವು ಆಡುತ್ತವೆ |

ಈ ವಾಕ್ಯಗಳಲ್ಲಿ ಕ್ರಿಯಾಪದವು ಕರ್ತೃವಿನ ಲಿಂಗ ವಚನಗಳನ್ನು ತೋರಿಸುತ್ತದೆಂದು ಹೇಳಿದೆಯಷ್ಟೆ. ಈ ಕ್ರಿಯಾಪದಗಳ ರೂಪಗಳಲ್ಲಿ 'ಆಡು' ಎಂಬುದು ಧಾತುವೆಂದೂ, ಏನೆ, ಏವೆ ಮುಂತಾದುವು ಆಖ್ಯಾತ ಪ್ರತ್ಯಯಗಳೆಂದೂ ನಿಮಗೆ ತಿಳಿದಿದೆ. ಆದರೆ 'ಆಡು' ಎಂಬ ಧಾತುವಿಗೂ 'ಏನೆ', 'ಏವೆ' ಮುಂತಾದ ಆಖ್ಯಾತ ಪ್ರತ್ಯಯಗಳಿಗೂ ಮಧ್ಯೆ 'ಉತ್ತ' ಎಂಬ ಪ್ರತ್ಯಯವಿದೆ. (ಈ ಕ್ರಿಯಾಪದದ ರೂಪಗಳಲ್ಲಿ ಆಡುತ್ತೇನೆ, ಆಡುತ್ತೇವೆ ಎಂಬುವು ಕೆಲಸವು ಇನ್ನೂ ಮುಗಿದಿಲ್ಲವೆಂದೂ ಈಗಲೂ ನಡೆಯುತ್ತಿದೆಯೆಂದೂ ತಿಳಿಸುತ್ತವೆ. ಇವು ವರ್ತಮಾನಕಾಲದ ಕ್ರಿಯಾಪದ ರೂಪಗಳು) ಈ 'ಉತ್ತ' ಎಂಬುದು ಕ್ರಿಯಾಪದದ ರೂಪವು ವರ್ತಮಾನಕಾಲದ ಕ್ರಿಯಾಪದವೆಂಬುದನ್ನು ತಿಳಿಸುತ್ತದೆ. ಆದ್ದರಿಂದ 'ಉತ್ತ' ಎಂಬುದಕ್ಕೆ ವರ್ತಮಾನಕಾಲದ "ಕಾಲಸೂಚಕ ಪ್ರತ್ಯಯ" ಎಂದು ಹೆಸರು.

## ಅಭ್ಯಾಸ

(೧) ಆಖ್ಯಾತ ಪ್ರತ್ಯಯ, ಕಾಲಸೂಚಕ ಪ್ರತ್ಯಯ ಎಂದರೇನು ?

(೨) ಈ ಧಾತುಗಳನ್ನು ವರ್ತಮಾನಕಾಲದ ಮೂರು ಪುರುಷಗಳಲ್ಲಿಯೂ ಬರೆಯಿರಿ:—

| | | | | |
|---|---|---|---|---|
| ಹಾಳು | ದಾಟು | ಹರಡು | ಎಳೆ | ನಡುಗು |
| ಕಳೆ | ಹುಟ್ಟು | ಇಡು | ಬೆಳೆ | ನೆನೆ |

(೩) ಗೀಟಿರುವ ಕಡೆ ಕ್ರಿಯಾಪದಗಳನ್ನು ಸೇರಿಸಿ :—

೧. ಅರಸರು ನಮ್ಮನ್ನು———. ೨. ಉಪಾಧ್ಯಾಯರು ಪಾಠ———. ೩. ಹುಡುಗರು ಅದನ್ನು ———. ೪. ಸುಣ್ಣದಿಂದ ಗೋಡೆಯು ಬಿಳುಪು ———. ೫. ಅವನು ಸೀಸದ ಕಡ್ಡಿಯನ್ನು ———. ೬. ರಾಮನು ಊಟವನ್ನು ———. ೭. ನಾನು ಅವನನ್ನು ———. ೮. ಅವಳು ಹಾಡನ್ನು ———. ೯. ಕುರುಬನು ಕುರಿಗಳನ್ನು ———. ೧೦. ನಿಮಗೂ ಮಸಿಯನ್ನು ———.

---

## ಪಾಠ ೧೫

### ಕಾಲಸೂಚಕ ಪ್ರತ್ಯಯಗಳು

### ಭೂತಕಾಲ Past tense

| | | ಏಕವಚನ | ಬಹುವಚನ |
|---|---|---|---|
| I Person | ಉತ್ತಮ ಪುರುಷ | ಮಾಡಿದೆನು | ಮಾಡಿದೆವು |
| II " | ಮಧ್ಯಮ ಪುರುಷ | ಮಾಡಿದೆ | ಮಾಡಿದಿರಿ |
| III " | ಪ್ರಥಮ ಪುರುಷ ಪು. | ಮಾಡಿದನು | ಮಾಡಿದರು |
| | ಸ್ತ್ರೀ. | ಮಾಡಿದಳು | ಮಾಡಿದರು |
| | ನಪುಂ. | ಮಾಡಿತು | ಮಾಡಿದುವು |

ಈ ವಾಕ್ಯಗಳಲ್ಲಿ ವರ್ತಮಾನಕಾಲದ ಕಾಲಸೂಚಕ ಪ್ರತ್ಯಯವಾದ 'ಉತ್ತ' ಎಂಬುದು ಕಂಡುಬರುವುದಿಲ್ಲ. ಅದಕ್ಕೆ ಬದಲಾಗಿ 'ದ' ಎಂಬುದು ಕಂಡುಬರುತ್ತದೆ. ಈ ಕ್ರಿಯಾಪದ ರೂಪಗಳು ಕೆಲಸವು ಹಿಂದೆಯೇ ಮುಗಿದುಹೋಯಿತೆಂಬುದನ್ನು ತಿಳಿಸುತ್ತವೆ. ಇವು ಭೂತಕಾಲದ ರೂಪಗಳು. ಇವುಗಳಲ್ಲಿ ಕಂಡುಬರುವ 'ದ' ಎಂಬುದು ಭೂತಕಾಲದ ಕಾಲಸೂಚಕ ಪ್ರತ್ಯಯ.

## ಅಭ್ಯಾಸ

(೧) ಭೂತಕಾಲದ ಕಾಲಸೂಚಕ ಪ್ರತ್ಯಯವಾವುದು ?

(೨) ಈ ಕೆಳಗೆ ಕೊಟ್ಟಿರುವ ಧಾತುಗಳಿಗೆ ಭೂತರೂಪಗಳನ್ನು ಎಲ್ಲಾ ಪುರುಷಗಳಲ್ಲಿಯೂ ಬರೆಯಿರಿ:—

ಸಾಕು, ಕಲಕು, ಮುಗಿ, ಹೋಗು, ಮಿಗು, ತೂಗು, ಮಲಗು, ಹಿಗ್ಗು, ಮೆಚ್ಚು, ನೆಚ್ಚು, ಹಂಚು.

(೩) ಈ ಕೆಳಗಿನ ವಾಕ್ಯಗಳಲ್ಲಿ ಗೀಟಿರುವ ಕಡೆ ಭೂತರೂಪದ ಕ್ರಿಯಾಪದಗಳನ್ನು ಸೇರಿಸಿ :—

೧. ಅವನು ಮನೆಗೆ ____. ೨. ರಾಮನು ಶಾಲೆಗೆ ____. ೩. ಗಾಡಿಯು ಊರನ್ನು ____. ೪. ನನ್ನ ಸೌಖ್ಯವು ____. ೫. ತಾಯಿಗೆ ಹಣವನ್ನು ____. ೬. ನಾನು ಮೇಲಿನ ತರಗತಿಗೆ ____. ೭. ನಿನ್ನೆ ಶಾಲೆಗೆ ರಜ ____.

---

## ಪಾಠ ೧೬

### ಕಾಲಸೂಚಕ ಪ್ರತ್ಯಯಗಳು

### ಭವಿಷ್ಯತ್ಕಾಲ Future Tense

| | | | ಏಕವಚನ | ಬಹುವಚನ |
|---|---|---|---|---|
| ೧. | ಉತ್ತಮ ಪುರುಷ | | ಬರುವೆನು | ಬರುವೆವು |
| | ಮಧ್ಯಮ ಪುರುಷ | | ಬರುವೆ | ಬರುವಿರಿ |
| | ಪ್ರಥಮ ಪುರುಷ | ಪು. | ಬರುವನು | ಬರುವರು |
| | | ಸ್ತ್ರೀ. | ಬರುವಳು | ಬರುವರು |
| | | ನಪುಂ. | ಬರುವುದು | ಬರುವುವು |
| ೨. | ಉತ್ತಮ ಪುರುಷ | | ಮಾಡುವೆನು | ಮಾಡುವೆವು |
| | ಮಧ್ಯಮ ಪುರುಷ | | ಮಾಡುವೆ | ಮಾಡುವಿರಿ |
| | ಪ್ರಥಮ ಪುರುಷ | ಪು. | ಮಾಡುವನು | ಮಾಡುವರು |
| | | ಸ್ತ್ರೀ. | ಮಾಡುವಳು | ಮಾಡುವರು |
| | | ನಪುಂ. | ಮಾಡುವುದು | ಮಾಡುವುವು |

ಈ ವಾಕ್ಯಗಳಲ್ಲಿ ಕ್ರಿಯಾಪದಗಳು ಕೆಲಸವು ಮುಂದೆ ನಡೆಯುವುದೆಂಬುದನ್ನು ಸೂಚಿಸುತ್ತವೆ. ಎಂದರೆ ಮೊದಲನೆಯ ಭಾಗದಲ್ಲಿ ಹೇಳಿರುವಂತೆ ಇವು ಭವಿಷ್ಯತ್ಕಾಲದ ಕ್ರಿಯಾಪದ ರೂಪಗಳು. ಇವುಗಳಲ್ಲಿ ಧಾತುವಿಗೂ ಆಖ್ಯಾತ ಪ್ರತ್ಯಯಗಳಿಗೂ ಮಧ್ಯೆ 'ಉವ' ಎಂಬ ಪ್ರತ್ಯಯವು ಕಂಡುಬರುತ್ತದೆ. 'ಉವ' ಎಂಬುದು ಭವಿಷ್ಯತ್ಕಾಲದ 'ಕಾಲಸೂಚಕ' ಪ್ರತ್ಯಯ.

ಇದರಿಂದ ತಿಳಿಯುವ ವಿಷಯಗಳು :—

ಧಾತುವಿಗೆ ವರ್ತಮಾನಕಾಲದಲ್ಲಿ 'ಉತ್ತ' ಭೂತಕಾಲದಲ್ಲಿ 'ದ' ಭವಿಷ್ಯತ್ಕಾಲದಲ್ಲಿ 'ಉವ' ಎಂಬ ಕಾಲ 'ಸೂಚಕ' ಪ್ರತ್ಯಯಗಳನ್ನು ಹಚ್ಚಿ ತರುವಾಯ ಆಖ್ಯಾತ ಪ್ರತ್ಯಯಗಳನ್ನು ಸೇರಿಸಬೇಕು.

## ಅಭ್ಯಾಸ

(೧) ಭವಿಷ್ಯತ್ಕಾಲವೆಂದರೇನು? ಇದರ ಕಾಲಸೂಚಕ ಪ್ರತ್ಯಯವಾವುದು?

(೨) ಸುತ್ತು, ಬತ್ತು, ಒದೆ, ಓದು, ತಿದ್ದು— ಇವುಗಳ ಭವಿಷ್ಯತ್ಕಾಲದ ರೂಪಗಳನ್ನು ಮೂರು ಪುರುಷಗಳಲ್ಲಿಯೂ ಬರೆಯಿರಿ.

(೩) ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಕ್ರಿಯಾಪದಗಳನ್ನು ಸೇರಿಸಿ ಅವು ಯಾವ ರೂಪಗಳೆಂಬುದನ್ನು ಹೇಳಿರಿ:—

೧. ಗುರುಗಳು ಧರ್ಮವನ್ನು ——. ೨. ನೀನು ಕೀರ್ತಿಯನ್ನು ——. ೩. ನಳನು ಕ್ಲೇಶ ——. ೪. ರಾಮನು ದುಷ್ಟರನ್ನು ——. ೫. ಅವನಿಗೆ ಯಶಸ್ಸು ——. ೬. ಅವನು ಸುಖವಾಗಿ ——. ೭. ಈ ದಿನ ಪಾಠ ——. ೮. ಶೀಘ್ರದಲ್ಲಿಯೇ ಯೂರೋಪಿನಲ್ಲಿ ಯುದ್ಧ ——.

---

## ಪಾಠ ೧೭

## ಕ್ರಿಯಾಪದದ ರೂಪಗಳು

ಹಿಂದಿನ ಪಾಠದಲ್ಲಿ ಧಾತು+ಕಾಲಸೂಚಕ ಪ್ರತ್ಯಯ+ಆಖ್ಯಾತ ಪ್ರತ್ಯಯಗಳು ಒಟ್ಟುಗೂಡಿ ಕ್ರಿಯಾಪದಗಳಾಗುತ್ತವೆಂಬುದನ್ನು ತಿಳಿಸಿದೆ.

## ೧. ಭೂತಕಾಲದ ಕ್ರಿಯಾಪದ ರೂಪಗಳು

ಧಾತು+ಕಾಲಸೂಚಕ ಪ್ರತ್ಯಯ+ಆಖ್ಯಾತ ಪ್ರತ್ಯಯ

ಏಕವಚನ

| | | | | | | | |
|---|---|---|---|---|---|---|---|
| ಉತ್ತಮ | | ತಿಳಿ | + | ದ | + | ಏನು | = ತಿಳಿದೆನು |
| ಮಧ್ಯಮ | | ತಿಳಿ | + | ದ | + | ಎ | = ತಿಳಿದೆ |
| ಪ್ರಥಮ, | ಪು. | ತಿಳಿ | + | ದ | + | ಅನು | = ತಿಳಿದನು |
| | ಸ್ತ್ರೀ. | ತಿಳಿ | + | ದ | + | ಅಳು | = ತಿಳಿದಳು |
| | ನ. | ತಿಳಿ | + | ದ | + | ಇತು | = ತಿಳಿಯಿತು |

ಬಹುವಚನ

| | | | | | | | |
|---|---|---|---|---|---|---|---|
| ಉತ್ತಮ | | ತಿಳಿ | + | ದ | + | ಎವು | = ತಿಳಿದೆವು |
| ಮಧ್ಯಮ | | ತಿಳಿ | + | ದ | + | ಇರಿ | = ತಿಳಿದಿರಿ |
| ಪ್ರಥಮ | ಪು. | ತಿಳಿ | + | ದ | + | ಅರು | = ತಿಳಿದರು |
| | ಸ್ತ್ರೀ. | ತಿಳಿ | + | ದ | + | ಅರು | = ತಿಳಿದರು |
| | ನ. | ತಿಳಿ | + | ದ | + | ಉವು | = ತಿಳಿದುವು |

## ೨. ವರ್ತಮಾನಕಾಲದ ಕ್ರಿಯಾಪದ ರೂಪಗಳು

| | ಧಾತು+ಕಾಲಪ್ರ.+ಆ.ಪ್ರ | ಏಕವಚನ | | ಬಹುವಚನ |
|---|---|---|---|---|
| ಉ. | ಮಾಡು+ಉತ್ತ+ಏನೆ | = ಮಾಡುತ್ತೇನೆ | +ಏವೆ | = ಮಾಡುತ್ತೇವೆ |
| ಮ. | ಮಾಡು+ಉತ್ತ+ಈಯೆ | = ಮಾಡುತ್ತೀಯೆ | +ಈರಿ | = ಮಾಡುತ್ತೀರಿ |
| ಪ್ರ. ಪು. | ಮಾಡು+ಉತ್ತ+ಆನೆ | = ಮಾಡುತ್ತಾನೆ | +ಆರೆ | = ಮಾಡುತ್ತಾರೆ |
| ಸ್ತ್ರೀ. | ಮಾಡು+ಉತ್ತ+ಆಳೆ | = ಮಾಡುತ್ತಾಳೆ | +ಆರೆ | = ಮಾಡುತ್ತಾರೆ |
| ನ. | ಮಾಡು+ಉತ್ತ+ಅದೆ | = ಮಾಡುತ್ತದೆ | +ಅವೆ | = ಮಾಡುತ್ತವೆ |

## ೩. ಭವಿಷ್ಯತ್ಕಾಲದ ಕ್ರಿಯಾಪದ ರೂಪಗಳು

| | ಧಾತು+ಕಾಲ ಪ್ರ.+ಆ.ಪ್ರ. | ಏಕವಚನ | | ಬಹುವಚನ |
|---|---|---|---|---|
| ಉ. | ಕೊಡು+ಉವ+ಎನು | = ಕೊಡುವೆನು | +ಎವು | = ಕೊಡುವೆವು |
| ಮ. | ಕೊಡು+ಉವ+ಎ | = ಕೊಡುವೆ | +ಇರಿ | = ಕೊಡುವಿರಿ |
| ಪ್ರ. ಪು. | ಕೊಡು+ಉವ+ಅನು | = ಕೊಡುವನು | +ಅರು | = ಕೊಡುವರು |
| ಸ್ತ್ರೀ. | ಕೊಡು+ಉವ+ಅಳು | = ಕೊಡುವಳು | +ಅರು | = ಕೊಡುವರು |
| ನ. | ಕೊಡು+ಉವ+ಉದು | = ಕೊಡುವುದು | +ಉವು | = ಕೊಡುವುವು |

## ಆಖ್ಯಾತ ಪ್ರತ್ಯಯಗಳ ಪಟ್ಟಿ

| ವರ್ತಮಾನಕಾಲ | | | ಭೂತಕಾಲ ಮತ್ತು ಭವಿಷ್ಯತ್ಕಾಲ | | |
|---|---|---|---|---|---|
| | ಏಕವಚನ | ಬಹುವಚನ | | ಏಕವಚನ | ಬಹುವಚನ |
| ಉತ್ತಮ | — ಏನೆ | ಏವೆ | | ಎನು | ಎವು |
| ಮಧ್ಯಮ | — ಈಯೆ | ಈರಿ | | ಎ | ಇರಿ |
| ಪ್ರಥಮ ಪು. | — ಆನೆ | ಆರೆ | | ಅನು | ಅರು |
| ಸ್ತ್ರೀ. | — ಆಳೆ | ಆರೆ | | ಅಳು | ಅರು |
| ನ. | — ಅದೆ | ಅವೆ | ನ. ಭೂತ | ಇತು | ಉವು |
| | | | ಭವಿ. | ಉದು | ಉವು |

---

### ಪಾಠ ೧೮

### ಕ್ರಿಯಾರೂಪಗಳು

### ವಿಧ್ಯರ್ಥ

Imperative mood

೧. ರಾಮ, ಆ ಹಣ್ಣನ್ನು ಇಲ್ಲಿ **ಕೊಡು.** ೨. ನೀವು ಮನೆಗೆ **ಹೋಗಿ.** ೩. ಹುಡುಗಿಯರು ಅಲ್ಲಿ **ನಿಲ್ಲಲಿ.** ೪. ನೀನು ಅದನ್ನು **ಬರೆ.** ೫. ಅಗಸನು ಬೆಳಿಗ್ಗೆ **ಬರಲಿ.** ೬. ನೀವಿಬ್ಬರೂ **ಆಡಿ.** ೭. ನಾವಿಬ್ಬರೂ **ಆಡೋಣ.** ೮. ನೀನು ನಾಳೆ **ಬಾ.** ೯. ಈ ಮಕ್ಕಳನ್ನು ದೇವರು **ಕಾಪಾಡಲಿ.**

೧. ರಾಮನು ಆ ಹಣ್ಣನ್ನು ನನ್ನ ಕೈಗೆ ಕೊಡಬೇಕು ಎಂಬ ನನ್ನ ಇಷ್ಟವನ್ನು ಈ ವಾಕ್ಯದಲ್ಲಿರುವ 'ಕೊಡು' ಎಂಬ ಕ್ರಿಯಾಪದವು ತಿಳಿಸುತ್ತದೆ.

೨. ನನ್ನೊಡನೆ ಮಾತನಾಡುತ್ತಿರುವವರು ಅಥವಾ ನನ್ನೆದುರಿಗಿರುವವರು ಮನೆಗೆ ಹೋಗಬೇಕು ಎಂಬ ನನ್ನ ಇಷ್ಟವನ್ನು ಈ ವಾಕ್ಯದಲ್ಲಿರುವ 'ಹೋಗಿ' ಎಂಬ ಕ್ರಿಯಾಪದವು ತಿಳಿಸುತ್ತದೆ.

೩. ಹುಡುಗಿಯರು ನಾನು ತೋರಿಸುತ್ತಿರುವ ಕಡೆ ನಿಲ್ಲಬೇಕು ಎಂಬ ನನ್ನ ಇಷ್ಟವನ್ನು ಅಥವಾ ಅಪ್ಪಣೆಯನ್ನು ಈ ವಾಕ್ಯದಲ್ಲಿರುವ 'ನಿಲ್ಲಲಿ' ಎಂಬ ಕ್ರಿಯಾಪದವು ತಿಳಿಸುತ್ತದೆ.

ಹೀಗೆಯೇ 'ಬರೆ', 'ಬರಲಿ', 'ಆಡಿ', 'ಆಡೋಣ', 'ಬಾ' ಎಂಬ ಕ್ರಿಯಾಪದಗಳು ಮನಸ್ಸಿನಲ್ಲಿರುವ ಇಷ್ಟವನ್ನು ಆಯಾ ವಾಕ್ಯಗಳಲ್ಲಿ ತಿಳಿಸುತ್ತವೆ.

ಹೀಗೆ ಮನಸ್ಸಿನಲ್ಲಿರುವ ಇಷ್ಟವನ್ನು ಅಥವಾ ಕೆಲಸಗಳು ಹೀಗೆ ನಡೆಯಬೇಕೆಂಬ ಉದ್ದೇಶವನ್ನು ತಿಳಿಸುವ ಕ್ರಿಯಾಪದಗಳಿಗೆ 'ವಿಧ್ಯರ್ಥದ ಕ್ರಿಯಾಪದಗಳು' ಎಂದು ಹೆಸರು. 'ವಿಧಿ' ಎಂದರೆ ನಿಯಮ, ಅಪ್ಪಣೆ, ಆಜ್ಞೆ. 'ವಿಧಿ' ಎಂಬುದರಲ್ಲಿ ಆಸೆ, ವಿಜ್ಞಾಪನೆ, ಆಶೀರ್ವಾದ ಎಂಬುವೂ ಸೇರಿವೆ.

ಮೇಲಿನ ವಾಕ್ಯಗಳಲ್ಲಿರುವ ಕ್ರಿಯಾರೂಪಗಳನ್ನು ನೋಡಿ.

ಕೊಡು
ಹೋಗಿ
ನಿಲ್ಲಲಿ
ಬರೆ
ಬರಲಿ
ಆಡಿ
ಆಡೋಣ
ಬಾ
ಕಾಪಾಡಲಿ

ಇಲ್ಲಿ ಧಾತುವಿಗೆ ಯಾವ ಕಾಲಸೂಚಕ ಪ್ರತ್ಯಯವೂ ಸೇರಿಲ್ಲ. ಧಾತುವಿಗೆ ಇ, ಅಲಿ, ಓಣ—ಎಂಬ ಆಖ್ಯಾತ ಪ್ರತ್ಯಯಗಳು ಮಾತ್ರ ಸೇರಿವೆ. ಕೊಡು, ಬರೆ ಎಂಬಲ್ಲಿ ಧಾತು ರೂಪದಲ್ಲಿಯೇ ಕ್ರಿಯಾಪದವು ನಿಂತಿದೆ.

**ವಿಧ್ಯರ್ಥದ ರೂಪಗಳು :** ಧಾತು :—'ಮಾಡು'

| | ಏಕವಚನ | ಬಹುವಚನ |
|---|---|---|
| ಉತ್ತಮ | ಮಾಡುವೆನು | ಮಾಡೋಣ |
| ಮಧ್ಯಮ | ಮಾಡು<br>ಮಾಡುವುದು | ಮಾಡಿರಿ |

ಪ್ರ.ಪು. (ಅವನು, ಅವಳು, ಅದು) ಮಾಡಲಿ, (ಅವರು, ಅವು)ಮಾಡಲಿ.

## ವಿಧಿರೂಪದ ಆಖ್ಯಾತ ಪ್ರತ್ಯಯಗಳು

| | | ಏಕವಚನ | ಬಹುವಚನ |
|---|---|---|---|
| I | ಉತ್ತಮ | —ಏನು | —ಓಣ |
| II | ಮಧ್ಯಮ | —ಧಾತುರೂಪ ಅಥವಾ — ಉದು | —ಇರಿ |
| III | ಪ್ರಥಮ ಪು. | —ಅಲಿ | —ಅಲಿ |
| | ಸ್ತ್ರೀ. | —ಅಲಿ | —ಅಲಿ |
| | ನ. | —ಅಲಿ | —ಅಲಿ |

### ಅಭ್ಯಾಸ

೧. 'ವಿಧ್ಯರ್ಥ' ಎಂದರೇನು? ೨. ವಿಧಿರೂಪವನ್ನು ಯಾವಾಗ ಉಪಯೋಗಿಸುತ್ತೇವೆ? ೩. ವಿಧ್ಯರ್ಥದ ಆಖ್ಯಾತ ಪ್ರತ್ಯಯಗಳು ಯಾವುವು? ೪. ತಿನ್ನು, ಬರೆ, ಬಿಡು, ಸಾಕು—ಈ ಧಾತುಗಳಿಗೆ ಎಲ್ಲಾ ಪುರುಷ ವಚನಗಳಲ್ಲಿಯೂ ವಿಧಿರೂಪಗಳನ್ನು ಬರೆಯಿರಿ.

(೨) ಕೆಳಗೆ ದಪ್ಪಕ್ಷರಗಳಲ್ಲಿ ವಿಧ್ಯರ್ಥದ ಕ್ರಿಯಾಪದಗಳಲ್ಲಿರುವ ಧಾತುಗಳನ್ನೂ ಪ್ರತ್ಯಯಗಳನ್ನೂ ಬೇರೆ ಬೇರೆಯಾಗಿ ಬರೆಯಿರಿ:—

೧. ದೇವರು ಒಳ್ಳೆಯದನ್ನು **ಮಾಡಲಿ.** ೨. ಹುಡುಗರೇ! ಆಡೋಣ **ಬನ್ನಿ.** ೩. ಮಹಾರಾಜರು ನಮ್ಮನ್ನು ಇನ್ನೂ ಅನೇಕ ವರ್ಷಗಳವರೆಗೆ **ಕಾಪಾಡಲಿ** ಎಂದು **ಪ್ರಾರ್ಥಿಸೋಣ.** ೪. ನಾನು ಚಿತ್ರವನ್ನು ಬರೆಯುವೆನು. ೫. ಮಗೂ! **ಬಾ,** ಪಾಠವನ್ನು **ಓದೋಣ.** ೬. ಹುಡುಗನು ಶಾಲೆಗೆ **ಹೋಗಲಿ.** ೭. ಆ ಬಳಪವನ್ನು ಮುರಿದು **ಕೊಡು.** ೮. ಎಲ್ಲರೂ ಶಾಂತಿ ಭೇದಿ **ನಿಲ್ಲಲಿ** ಎಂದು ಹಾರೈಸಿ. ೯. ಪರಂಗಿ ಹಣ್ಣು **ತಿನ್ನು,** ಅದು ಒಳ್ಳೆಯದನ್ನು ಮಾಡುತ್ತದೆ. ೧೦. ಕುರಿಗಳನ್ನು **ಓಡಿಸು.**

---

## ಪಾಠ ೧೯

### ಕ್ರಿಯಾರೂಪಗಳು

### ನಿಷೇದಾರ್ಥ

Negative form

| | | | |
|---|---|---|---|
| I | ಉತ್ತಮ | ನಾನು ಹಣ್ಣನ್ನು ಕೊಡೆನು. | ನಾವು ಹಣ್ಣನ್ನು ಕೊಡೆವು. |
| II | ಮಧ್ಯಮ | ನೀನು ಹಣ್ಣನ್ನು ಕೊಡೆ. | ನೀವು ಹಣ್ಣನ್ನು ಕೊಡಿರಿ. |
| III | ಪ್ರ. ಪು.— | ಅವನು ಹಣ್ಣನ್ನು ಕೊಡನು. | ಅವರು ಹಣ್ಣನ್ನು ಕೊಡರು. |
| | ಸ್ತ್ರೀ.— | ಅವಳು ಹಣ್ಣನ್ನು ಕೊಡಳು. | ಅವರು ಹಣ್ಣನ್ನು ಕೊಡರು. |
| | ನ.— | ಅದು ಹಣ್ಣನ್ನು ಕೊಡದು. | ಅವು ಹಣ್ಣನ್ನು ಕೊಡವು. |

ಈ ವಾಕ್ಯಗಳಲ್ಲಿ ಕೊಡೆನು, ಕೊಡೆವು, ಕೊಡೆ, ಕೊಡಿರಿ, ಕೊಡನು, ಕೊಡಳು, ಕೊಡದು, ಕೊಡವು—ಈ ಕ್ರಿಯಾಪದ ರೂಪಗಳು ಕೆಲಸವು ನಡೆಯಲಿಲ್ಲವೆಂಬುದನ್ನು ತಿಳಿಸುತ್ತವೆ. ಹೀಗೆ ಕೆಲಸವು ನಡೆಯಲಿಲ್ಲವೆಂಬುದನ್ನು ತಿಳಿಸುವ ಕ್ರಿಯಾಪದ ರೂಪಗಳಿಗೆ 'ನಿಷೇಧಾರ್ಥದ ಕ್ರಿಯಾರೂಪಗಳು' ಎಂದು ಹೆಸರು.

[ಈ ನಿಷೇಧರೂಪದ ಅರ್ಥವನ್ನು ಅವನು ಕೊಡಲಿಲ್ಲ, ಕೊಡುವುದಿಲ್ಲ ಎಂದು ಹೇಳಿಯೂ ತಿಳಿಸಬಹುದು.]

ಈ ನಿಷೇಧರೂಪದ ಕ್ರಿಯಾಪದಗಳನ್ನು ವಿಂಗಡಿಸಿ ನೋಡಿ.

ಧಾತು—ಆಖ್ಯಾತ ಪ್ರತ್ಯಯ
ಕೊಡು — ಎನು.

ಇಲ್ಲಿ ಕಾಲಸೂಚಕ ಪ್ರತ್ಯಯವೇ ಇಲ್ಲ. ಧಾತುವಿಗೆ ಈ ರೂಪದ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿದರೆ 'ನಿಷೇಧಾರ್ಥದ ಕ್ರಿಯಾಪದಗಳು' ಆಗುತ್ತವೆ.

ನಿಷೇಧಾರ್ಥದ ಆಖ್ಯಾತ ಪ್ರತ್ಯಯಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ಕೊಟ್ಟಿದೆ :—

| | ಏಕ | ಬಹು | ಏಕ | ಬಹು |
|---|---|---|---|---|
| ಉತ್ತಮ | —ಎನು | —ಎವು | ಮಾಡೆನು | ಮಾಡೆವು |
| ಮಧ್ಯಮ | —ಎ | —ಇರಿ | ಮಾಡೆ | ಮಾಡಿರಿ |
| ಪ್ರಥಮ ಪು. | —ಅನು | —ಅರು | ಮಾಡನು | ಮಾಡರು |
| ಸ್ತ್ರೀ. | —ಅಳು | —ಅರು | ಮಾಡಳು | ಮಾಡರು |
| ನ. | —ಅದು | —ಅವು | ಮಾಡದು | ಮಾಡವು |

## ಅಭ್ಯಾಸ

(೧) ನಿಷೇಧಾರ್ಥವೆಂದರೇನು ?

(೨) ಹೊಯ್, ಬಯ್, ಕೊಯ್, ಸುರಿ, ಹೀರು, — ಈ ಧಾತುಗಳ ನಿಷೇಧಾರ್ಥದ ರೂಪಗಳನ್ನು ಬರೆಯಿರಿ.

(೩) ಈ ಕೆಳಗೆ ಗೀಟವಿರುವ ಕಡೆ ನಿಷೇಧಕ್ರಿಯೆಯನ್ನು ಸೇರಿಸಿ :—

೧. ಆಳು ಕೆಲಸವನ್ನು—. ೨. ಹುಡುಗನು ಪಾಠವನ್ನು—. ೩. ಹಸು

ಹಾಲನ್ನು—. ೪. ಮರವು ಫಲವನ್ನು—. ೫. ನಾನು ಶಾಲೆಗೆ—. ೬. ನೀನು ಮರವನ್ನು—. ೭. ನೀವು ಅಷ್ಟು ಹೊತ್ತಿಗೆ ಅಲ್ಲಿ—. ೮. ನಾವು ಇಷ್ಟು ಹಣ್ಣು—. ೯. ಜಾನಕಿ ಬಹಳ ಹೊತ್ತು ಅಲ್ಲಿ—. ೧೦. ಈ ಲೆಕ್ಕವನ್ನು ನಾನು—.

---

## ಪಾಠ ೨೦

### ಕ್ರಿಯಾಪದ ರೂಪಗಳು

### ಕರ್ತರಿ, ಕರ್ಮಣಿ ಪ್ರಯೋಗಗಳು

೧. ರಾಮನು **ಮನೆಯನ್ನು** ಸೇರಿದನು.
ರೈತನು **ಹೊಲವನ್ನು** ಉಳುತ್ತಾನೆ.
ನಿಮ್ಮ ಅಣ್ಣನು **ನಿನ್ನನ್ನು** ವಿಚಾರಿಸಿದನು.
ಹುಡುಗಿಯು **ಚಿತ್ರವನ್ನು** ಬರೆಯುತ್ತಾಳೆ.

೨. ಇಲಿಯು ಬಿಲಕ್ಕೆ ಓಡಿತು.
ಸೀತೆಯು ಮೆಲ್ಲನೆ ಅಲ್ಲಿಗೆ ಬಂದಳು.
ಅಪ್ಪನು ಅಲ್ಲಿ ನಿಂತಿದ್ದಾನೆ.
ಹಸು ಅಲ್ಲಿ ಮಲಗಿದೆ.

ಮೇಲೆ ೧ನೆಯ ಗುಂಪಿನಲ್ಲಿರುವ ವಾಕ್ಯಗಳಲ್ಲಿ ಕರ್ಮಪದಗಳಿವೆ. ಅಲ್ಲಿರುವ ಕ್ರಿಯಾಪದಗಳೆಲ್ಲವೂ ಸಕರ್ಮಕ ಕ್ರಿಯಾಪದಗಳು.

೨ನೆಯ ಗುಂಪಿನ ವಾಕ್ಯಗಳಲ್ಲಿ ಕರ್ಮಪದಗಳಿಲ್ಲ. ಆ ಕ್ರಿಯಾ ಪದಗಳಿಗೆ ಕರ್ಮಪದವು ಬೇಕಾಗಿಲ್ಲ. ಅವೆಲ್ಲವೂ ಅಕರ್ಮಕ ಕ್ರಿಯಾ ಪದಗಳು.

ಒಂದನೆಯ ಗುಂಪಿನಲ್ಲಿರುವ ವಾಕ್ಯಗಳನ್ನು ಎಂದರೆ ಕರ್ಮಪದ ಗಳಿರುವ ವಾಕ್ಯಗಳನ್ನು ಮತ್ತೊಂದು ರೀತಿಯಿಂದ ಬರೆಯಬಹುದು.

| ೧ | ೨ |
|---|---|
| ೧. ರಾಮನು ಮನೆಯನ್ನು ಸೇರಿದನು. | ೧. ರಾಮನಿಂದ ಮನೆಯು ಸೇರಲ್ಪಟ್ಟಿತು. |
| ೨. ರೈತನು ಹೊಲವನ್ನು ಉಳುತ್ತಾನೆ | ೨. ರೈತನಿಂದ ಹೊಲವು ಉಳಲ್ಪಡುತ್ತದೆ. |

| ೧ | ೨ |
|---|---|
| ೩. ನಿಮ್ಮ ಅಣ್ಣನು ನಿನ್ನನ್ನು ವಿಚಾರಿಸಿದನು. | ೩. ನೀನು ನಿಮ್ಮ ಅಣ್ಣನಿಂದ ವಿಚಾರಿಸಲ್ಪಟ್ಟೆ. |
| ೪. ಹುಡುಗಿಯು ಚಿತ್ರವನ್ನು ಬರೆಯುತ್ತಾಳೆ. | ೪. ಚಿತ್ರವು ಹುಡುಗಿಯಿಂದ ಬರೆಯಲ್ಪಡುತ್ತದೆ. |

ಎಡಗಡೆ ೧ ಎಂಬುದರ ಕೆಳಗೆ ಕೊಟ್ಟಿರುವ ೧, ೨, ೩, ೪ನೆಯ ವಾಕ್ಯಗಳ ಅರ್ಥವೂ, ಬಲಗಡೆ ೨ ಎಂಬುದರ ಕೆಳಗೆ ಕೊಟ್ಟಿರುವ ೧, ೨, ೩, ೪ನೆಯ ವಾಕ್ಯಗಳ ಅರ್ಥವೂ ಒಂದೇ. ಆದರೆ ರೂಪದಲ್ಲಿ ಇವೆರಡು ಗುಂಪಿನ ವಾಕ್ಯಗಳಿಗೂ ವ್ಯತ್ಯಾಸವಿದೆ.

೧ನೆಯ ಗುಂಪಿನ ವಾಕ್ಯಗಳಿಗೆ '**ಕರ್ತರಿ ಪ್ರಯೋಗದವು**' ಎಂದು ಹೆಸರು.

೨ನೆಯ ಗುಂಪಿನ ವಾಕ್ಯಗಳಿಗೆ '**ಕರ್ಮಣಿ ಪ್ರಯೋಗದವು**' ಎಂದು ಹೆಸರು.

ಕನ್ನಡದಲ್ಲಿ ಕರ್ಮಣಿ ಪ್ರಯೋಗವು ಹೆಚ್ಚಾಗಿ ರೂಢಿಯಲ್ಲಿಲ್ಲ.

## ಅಭ್ಯಾಸ

ಈ ಕೆಳಗೆ ಕೊಟ್ಟಿರುವ ವಾಕ್ಯಗಳು ಕರ್ತರಿ ಪ್ರಯೋಗದವೇ ? ಕರ್ಮಣಿ ಪ್ರಯೋಗದವೇ ? ತಿಳಿಸಿ.

೧. ಅರಸನು ಕಥೆಯನ್ನು ಕೇಳುತ್ತಾನೆ. ೨ ಎತ್ತಿನಿಂದ ಭಾರವು ಎಳೆಯಲ್ಪಡಲಾರದು. ೩. ಆಳು ಕೆಲಸವನ್ನು ಮಾಡಿದನು. ೪. ಸೂರ್ಯನು ಬೆಳಕನ್ನು ಕೊಡುತ್ತಾನೆ. ೫. ಜವಾನನಿಂದ ಧೂಳು ಒರಿಸಲ್ಪಟ್ಟಿತು. 6. ಅಜ್ಜಿ ಹಾಡನ್ನು ಹೇಳುತ್ತಾಳೆ. ೭. ಸೂರ್ಯನಿಂದ ಬೆಳಕು ಕೊಡಲ್ಪಡುತ್ತದೆ. ೮. ಗಾಳಿಯು ಮರವನ್ನು ಉರುಳಿಸಿತು. ೯. ಪುಸ್ತಕವು ಹುಡುಗರಿಂದ ಓದಲ್ಪಟ್ಟಿತು. ೧೦. ಹಸು ಗಿಡವನ್ನು ತುಳಿಯಿತು. ೧೧. ರಾಮನಿಂದ ಗುಡಿಯು ಕಟ್ಟಲ್ಪಟ್ಟಿತು. ೧೨. ಕವಿಯು ಗ್ರಂಥವನ್ನು ರಚಿಸುತ್ತಾನೆ.

## ಪಾಠ ೨೧

# ಪುನರಾವರ್ತನೆ

### ಅಭ್ಯಾಸ

೧. ಕ್ರಿಯಾಪದ, ಧಾತು—ಇವುಗಳಿಗೇನು ವ್ಯತ್ಯಾಸ ?

೨. ಧಾತುಗಳಲ್ಲಿರುವ ಭೇದಗಳನ್ನು ಉದಾಹರಣೆಗಳೊಡನೆ ವಿವರಿಸಿ.

೩. ಆಖ್ಯಾತಪ್ರತ್ಯಯ, ಕಾಲಸೂಚಕ ಪ್ರತ್ಯಯ—ಎಂದರೇನು ?

೪. ಕ್ರಿಯಾಪದಕ್ಕೆ ಎಷ್ಟು ಕಾಲಗಳುಂಟು ? ಒಂದಕ್ಕೊಂದಕ್ಕೆ ಏನು ವ್ಯತ್ಯಾಸ ?

೫. ಭವಿಷ್ಯತ್ಕಾಲವೆಂದರೇನು ? ಇದರ ಕಾಲಸೂಚಕ ಪ್ರತ್ಯಯವಾವುದು ?

೬. ವಿಧ್ಯರ್ಥ ನಿಷೇದಾರ್ಥಗಳೆಂದರೇನು ? ಉದಾಹರಣೆಗಳನ್ನು ಕೊಡಿ.

೭. ಆಖ್ಯಾತ ಪ್ರತ್ಯಯಗಳೆಂದರೇನು ? ಅವೆಷ್ಟಿವೆ ? ಉದಾಹರಣೆಗಳನ್ನು ಕೊಟ್ಟು ವಿವರಿಸಿ.

೮. ಕರ್ತರಿ ಪ್ರಯೋಗ, ಕರ್ಮಣಿ ಪ್ರಯೋಗ—ಎಂದರೇನು ? ಒಂದು ವಾಕ್ಯವನ್ನು ಕರ್ತರಿ ಪ್ರಯೋಗದಿಂದ ಕರ್ಮಣಿ ಪ್ರಯೋಗಕ್ಕೆ ಬದಲಾಯಿಸುವುದು ಹೇಗೆ ?

೯. ಈ ಧಾತುಗಳ ನಿಷೇಧಾರ್ಥದ ಕ್ರಿಯಾರೂಪಗಳನ್ನು ಬರೆಯಿರಿ — ಶೋಧಿಸು ಹೊಯ್ ಬರೆ ಕಾಣು ಉಡು

೧೦. ಈ ಧಾತುಗಳ ಕ್ರಿಯಾರೂಪಗಳನ್ನು ಮೂರು ಕಾಲಗಳಲ್ಲಿಯೂ ಬರೆಯಿರಿ.

| | | | |
|---|---|---|---|
| ಹರಡು | ಹೊಡೆ | ಕಡಿ | ತರ |
| ಹೊರಡು | ಕೂಗು | ಓಡು | |
| ಬದುಕಿಸು | ಹಿಡಿ | ಬಿಡು | |

## ಪಾಠ ೨೨

### ಕೃದಂತಗಳು

ಅವನು **ಬರೆದ** ಚಿತ್ರ ಸುಂದರವಾಗಿದೆ.
ನೀನು ನನ್ನನ್ನು **ಕರೆದ** ಕೆಲಸವೇನು ?
ಅವನಿಗೆ **ತಿಳಿದ** ವಿಷಯ ಹೇಳಲಿ.
**ಉಳಿದ** ಹಣವನ್ನು ಕೊಡು.

—ಇಲ್ಲಿ ಕೊಟ್ಟಿರುವ ವಾಕ್ಯಗಳಲ್ಲಿ ದಪ್ಪಕ್ಷರದಲ್ಲಿರುವ ಬರೆದ, ಕರೆದ, ತಿಳಿದ, ಉಳಿದ—ಎಂಬ ರೂಪಗಳು ಬರೆ, ಕರೆ, ತಿಳಿ, ಉಳಿ ಎಂಬ ಧಾತುಗಳಿಂದ ಆಗಿವೆ.

ಬರೆ + ದ = ಬರೆದ
ಕರೆ + ದ = ಕರೆದ
ತಿಳಿ + ದ = ತಿಳಿದ
ಉಳಿ + ದ = ಉಳಿದ

ಇಲ್ಲಿ 'ದ' ಎಂಬುದು ಭೂತಕಾಲದ ಕಾಲಸೂಚಕ ಪ್ರತ್ಯಯ. ಭೂತಕಾಲದ ಕ್ರಿಯಾರೂಪಗಳ ಹಾಗೆಯೇ ಈ ರೂಪಗಳೂ ಹಿಂದೆ **ನಡೆದುಹೋದ** ಅಥವಾ **ಆಗಿಹೋದ** ಕೆಲಸದ ವಿಚಾರವನ್ನು ತಿಳಿಸುತ್ತವೆ. ಆದರೆ, ಬರೆಡ, ತಿಳಿದ, ಉಳಿದ—ಎಂಬ ಈ ರೂಪಗಳು ಕ್ರಿಯಾಪದಗಳಲ್ಲ. ಇವುಗಳಿಗೆ ಎನು, ಎವು, ಅನು, ಆಳು, ಅದು ಅರು, ಅವು ಮುಂತಾದ ಅಖ್ಯಾತಪ್ರತ್ಯಯಗಳು ಸೇರಿಲ್ಲ. ಆದಕಾರಣ ಇವು ಕೆಲಸವು ಮುಗಿಯಿತೆಂಬ ಅರ್ಥವನ್ನು ಕೊಡುವುದಿಲ್ಲ. ಇವುಗಳ ಅರ್ಥವು ಸಂಪೂರ್ಣವಾಗಿಲ್ಲ. ಬರೆದ, ಕರೆದ, ತಿಳಿದ, ಉಳಿದ—ಇಂತಹ ರೂಪಗಳಿಗೆ ಭೂತಕಾಲದ 'ಕೃದಂತನಾಮಪ್ರಕೃತಿಗಳು', 'ಕೃದಂತಗಳು' ಎಂದು ಹೆಸರು.

ಬರೆಯುವ ಪುಸ್ತಕ
ಕರೆಯುವ ಕೆಲಸ
ತಿಳಿಯುವ ಮಾತು
ಉಳಿಯುವ ಹಣ

ಇಲ್ಲಿ ಧಾತುಗಳಮೇಲೆ 'ಉವ' ಎಂಬ ಭವಿಷ್ಯತ್ಕಾಲದ ಕಾಲ ಸೂಚಕ ಪ್ರತ್ಯಯವು ಸೇರಿದೆ. 'ಉವ' ಎಂಬ ಕಾಲಸೂಚಕ ಪ್ರತ್ಯಯವು ಸೇರಿರುವ ಕೃದಂತನಾಮ ಪ್ರಕೃತಿಗಳು ವರ್ತಮಾನಕಾಲದ ಮತ್ತು ಭವಿಷ್ಯತ್ಕಾಲದ ಕೃದಂತನಾಮಪ್ರಕೃತಿಗಳಾಗುತ್ತವೆ.

| ಭೂತ ಕಾಲ | | ವರ್ತಮಾನ ಮತ್ತು ಭವಿಷ್ಯತ್ | |
|---|---|---|---|
| ಏಕವಚನ | ಬಹುವಚನ | ಏಕವಚನ | ಬಹುವಚನ |
| ಬರೆದವರು<br>ಬರೆದವಳು | ಬರೆದವರು | ಬರೆಯುವವನು<br>ಬರೆಯುವವಳು | —ರು |
| ಬರೆದುದು | ಬರೆದುವು | ಬರೆಯುವುದು | —ವು |
| ತಿಳಿದವನು<br>ತಿಳಿದವಳು | ತಿಳಿದವರು | ತಿಳಿಯುವವನು<br>ತಿಳಿಯುವವಳು | —ವು |
| ತಿಳಿದುದು | ತಿಳಿದುವು | ತಿಳಿಯುವುದು | —ವು |

**ನಿಷೇಧ**

| ಏಕ | ಬಹು |
|---|---|
| ಬರೆಯದವನು<br>ಬರೆಯದವಳು | ಬರೆಯದವರು |
| ಬರೆಯದುದು | ಬರೆಯದುವು |

ಈ ರೂಪಗಳಲ್ಲಿ ಬರೆದ, ಬರೆಯುವ, ತಿಳಿದ, ತಿಳಿಯುವ, ಬರೆಯದ ಎಂಬ ಕೃದಂತನಾಮ ಪ್ರಕೃತಿಗಳಿಗೆ ಏಕವಚನದಲ್ಲಿ 'ಅವನು', 'ಅವಳು', 'ಉದು', ಬಹುವಚನದಲ್ಲಿ 'ಅವರು', 'ಉವು' ಎಂಬೀ ಪ್ರತ್ಯಯಗಳನ್ನು ಸೇರಿಸಿದೆ. ಇವುಗಳಿಗೆ 'ಕೃದಂತ ನಾಮ'ಗಳೆಂದು ಹೆಸರು.

ಅಭ್ಯಾಸ

೧. ಕೃದಂತನಾಮ ಪ್ರಕೃತಿಗಳೆಂದರೇನು? ಇವುಗಳಿಗೆ ಉದಾಹರಣೆಗಳನ್ನು ಕೊಡಿ.

೨. ಓಡುವ ಕುದುರೆ, ಕೊಡುವ ಯತಿ, ಕರೆಯದ ಹುಡುಗ, ತಿನ್ನದ ವಿಷ, ತಿಳಿದ ಮನುಷ್ಯ, ಓದುವ ಪುಸ್ತಕ, ಬರೆದ ಕಾಗದ, ತಿಳಿಯುವ ಸಮಾಚಾರ, ಕಡೆದ ಕಲ್ಲು, ಕುಡಿದ ನೀರು, ಬೀಳುವ ಹಲ್ಲು, ನೋಯುವ ಕಣ್ಣು, ಮಾಡಿದ ಕೆಲಸ,

ಸೇರಿಸಿದ ಕಾಗದ, ಕಳೆದ ವರುಷ, ಕುಣಿಯುವ ಹುಡುಗಿ, ಹೋದ ದಾರಿ, ಓದಿದ ಪಾಠ—ಇವುಗಳಲ್ಲಿ ಕೃದಂತಗಳು ಯಾವುವು?

೩. ಕೃದಂತನಾಮಗಳೆಂದರೇನು?

ಈ ಕೆಳಗಿನ ಕೃದಂತನಾಮಗಳನ್ನು ಗುರುತಿಸಿ:—

೧. ಕೊಟ್ಟವನು ಕೋಡಂಗಿ, ಈಸಿಕೊಂಡವನು ವೀರಭದ್ರ. ೨. ಹಂಚಿದವನಿಗೆ ಹಲ್ಲೂ ಬಾಯಿ. ೩ ಬಾಯಿದ್ದವನು ಬದುಕುತ್ತಾನೆ. ೪. ಇಲ್ಲಿ ನಿಂತಿದ್ದವನೆಲ್ಲಿ ಹೋದ? ೫. ಶಾಲೆಗೆ ಬಂದಿರುವವರು ಯಾರು? ೬. ಕೈಗೆ ಸಿಕ್ಕಿದ್ದನ್ನು ಬಿಡುವವನು ಹುಚ್ಚ.

೪. ಈ ಕೆಳಗೆ ಕೊಟ್ಟಿರುವ ಧಾತುಗಳಿಗೆ ಭೂತಕಾಲದ ಮತ್ತು ವರ್ತಮಾನ ಕಾಲದ (೧) ಕೃದಂತನಾಮ ಪ್ರಕೃತಿಗಳ ಮತ್ತು (೨) ಕೃದಂತನಾಮಗಳ ರೂಪ ಗಳನ್ನು ಬರೆದು, ಇವುಗಳನ್ನು ವಾಕ್ಯಗಳಲ್ಲಿ ಉಪಯೋಗಿಸಿ—

ಕೊಡು, ಬಿಡಿ, ಬಿಡಿಸು, ಕುಡಿಸು, ಬೆಳೆ, ಕೊಳೆ, ಹಾಡು, ನೆನೆ, ನಡೆ, ಸುಳಿ, ಧಣಿ, ಮುತ್ತು, ಹಾಸು, ಆಳು, ಅಳೆ, ಮರೆ.

---

## ಪಾಠ ೨೩

### ಭಾವಕೃದಂತಗಳು

### ಕೃಧಂತ ಭಾವನಾಮಗಳು Abstract nouns.

೧. ಅವನಿಗೂ ಇವನಿಗೂ ತುಂಬಾ **ಹೋಲಿಕೆ** ಇದೆ. ರಾತ್ರಿಯ ಹೊತ್ತು ಅಲ್ಲಿಗೆ ಹೋಗುವುದಕ್ಕೆ ನನಗೆ **ಅಂಜಿಕೆ.** ನಿಮ್ಮ **ಬೆದರಿಕೆಗೆ** ನಾನು ಅಂಜುವುದಿಲ್ಲ. ಕದಿಯುವವರಿಗೆ **ನಾಚಿಕೆ** ಎಲ್ಲಿ ಬಂತು? (——ಇಕೆ)

೨. ಅಮ್ಮನು **ಅಡಿಗೆ** ಮಾಡುತ್ತಾಳೆ. ಸೀತೆಗೆ **ಹೊಲಿಗೆ** ಬರುತ್ತದೆ. (—ಇಗೆ)

೩. ಈ ಹೊಳೆಯಲ್ಲಿ ಈಜುವುದಕ್ಕೆ ಹೋಗಬೇಡ, ತುಂಬಾ **ಸೆಳವು.** ನಾನು ಮುದುಕ, ನನಗೆ **ಮರವು** ಹೆಚ್ಚು. (—ಅವು)

೪. ಮಳೆಯಲ್ಲಿ ನೆನೆದದ್ದರಿಂದ ಅವನಿಗೆ ಮೈ **ನೋವು.** ಬೇಸಗೆಯಲ್ಲಿ ದನಕರುಗಳಿಗೆ ಒಳ್ಳೆಯ **ಮೇವು** ಸಿಕ್ಕುವುದು ಕಷ್ಟ. (—ವು)

೫. ಮಕ್ಕಳ **ಕುಣಿತ.** ಕರುಗಳ **ನೆಗೆತ.** (—ತ)

೬. ಮಕ್ಕಳ **ನಡೆವಳಿ** ಚನ್ನಾಗಿರಬೇಕು. (—ವಳಿ)

೭. ನವರಾತ್ರಿಯ **ನೋಟ,** ಮಕ್ಕಳ **ಆಟ,** ತಿಗಣೆಯ **ಕಾಟ,** ಮದುವೆಯ **ಊಟ.** (—ಟ)

೮. ನಿನ್ನ ಮಾತನ್ನು ಕೇಳಿದರೆ ನನಗೆ **ನಗೆ** ಬರುತ್ತದೆ. ಅವನ ತಲೆಯಮೇಲಿನ **ಹುಲ್ಲು ಹೊರೆ** ತುಂಬಾ ದೊಡ್ಡದು. (—ಎ)

೯. ಅಳತೆಯೂ ಆಯಸ್ಸೂ ಒಂದೇ. ರಾಮನದು ಒಳ್ಳೆಯ ನಡತೆ. (—ಅತೆ)

೧೦. ದೇವರ ಕಿರೀಟದ **ಹೊಳಪು.** ಅಂದಿನ ಹೊಡೆತದ **ನೆನಪು.** (—ಅಪು)

೧೧. ಮಗುವಿನ **ಬೆಳೆವಳಿಕೆ** ತೃಪ್ತಿಕರವಾಗಿದೆ. ನಮ್ಮೂರಿನ ಕಾಳನಿಗೆ **ತಿಳಿವಳಿಕೆ** ಕಡಮೆ. (—ವಳಿಕೆ)

೧೨. ಅದೋ ಮದುವೆಯ **ಮೆರವಣಿಗೆ** ಬಂತು. ಸೂರಿಯ **ಬರವಣಿಗೆ** ಚನ್ನಾಗಿದೆ. (—ವಣಿಗೆ)

೧೩. ಹಿರಿಯರು ಹೇಳುವುದು ನನಗೆ **ಒಪ್ಪಿತ.** ತಮ್ಮ **ತಪ್ಪಿತ**ವನ್ನು ಒಪ್ಪಿಕೊಳ್ಳುವುದು ಸತ್ಯವಂತರ ಲಕ್ಷಣ. (— ಇತ)

೧೪. ಬೀಜಗಳನ್ನು ನೆಟ್ಟು ಒಂದು ತಿಂಗಳಾಯಿತು. **ಮೊಳಕೆಗಳೇ** ಕಾಣಿಸುವುದಿಲ್ಲವಲ್ಲ ? ಅವಳು ಕೊಟ್ಟ ತುಪ್ಪಕ್ಕೆ ಎಣ್ಣೆಯ **ಬೆರಕೆ** ಇದೆ. (—ಅಕೆ)

೧೫. ನೀನು ಹೀಗೆ **ಹೇಳುವುದು** ತಪ್ಪು. ಅವನು **ಮಾಡುವುದು** ಸರಿ. (—ವುದು)

ಮೇಲೆ ಕೊಟ್ಟಿರುವ ವಾಕ್ಯಗಳಲ್ಲಿ ದಪ್ಪಕ್ಷರಗಳ ಪದಗಳು ಧಾತುಗಳಿಂದ ಬಂದಿವೆಯೇ ? ನೋಡಿ.

೧. ಹೋಲಿಕೆ, ಅಂಜಿಕೆ, ಬೆದರಿಕೆ, ನಾಚಿಕೆ.

ಇವು ಹೋಲು, ಅಂಜು, ಬೆದರು, ನಾಚು—ಎಂಬ ಧಾತುಗಳಿಂದ ಬಂದುವು. ಈ ಧಾತುಗಳಿಗೆ—ಇಕೆ ಎಂಬ ಪ್ರತ್ಯಯವನ್ನು ಸೇರಿಸಿದರೆ ಹೋಲಿಕೆ, ಅಂಜಿಕೆ, ಬೆದರಿಕೆ, ನಾಚಿಕೆ ಎಂಬ ರೂಪಗಳಾಗುತ್ತವೆ. ಇಂತಹ ರೂಪಗಳಿಗೂ ' ಕೃದಂತ ಭಾವನಾಮಗಳು ' ಅಥವಾ ' ಭಾವಕೃದಂತಗಳು ' ಎಂದು ಹೆಸರು.

(ಹಿಂದೆ ಕೊಟ್ಟಿರುವ ಉದಾಹರಣೆಗಳಲ್ಲಿ ಧಾತುಗಳ ಮೇಲೆ ಬಂದಿರುವ ಭಾವನಾಮ ಪ್ರತ್ಯಯಗಳನ್ನು ಆವರಣ ಚಿಹ್ನೆಯಲ್ಲಿ ಕೊಟ್ಟಿದೆ.)

| ಧಾತು | ಪ್ರತ್ಯಯ | ರೂಪ |
|---|---|---|
| ಕುಣಿ | ತ | ಕುಣಿತ |
| ಹೊಡೆ | ತ | ಹೊಡೆತ |
| ತೆರು | ಇಗೆ | ತೆರಿಗೆ |
| ಆಡು | ಟ | ಆಟ |
| ನಗು | ಎ | ನಗೆ |
| ಮೇ | ವು | ಮೇವು |
| ನಡೆ | ವಳಿ | ನಡೆವಳಿ |

| ಧಾತು | ಪ್ರತ್ಯಯ | ರೂಪ |
|---|---|---|
| ಕಳು | ಅವು | ಕಳವು |
| ಬೆಳೆ | ಅಸು | ಬೆಳಸು |
| ಬಾಳು | ಇಕೆ | ಬಾಳಿಕೆ |
| ಮಾಡು | ವಿಕೆ | ಮಾಡುವಿಕೆ |
| ಮೆರೆ | ವಣಿಗೆ | ಮೆರೆವಣಿಗೆ |
| ತಿಳಿ | ವು | ತಿಳಿವು |
| ನೋ | ವು | ನೋವು |
| ಕೊರೆ | ಅತೆ | ಕೊರತೆ |

ನೀನು **ಮಾಡುವುದು** ತಪ್ಪು.
ಅವನು **ಬರೆಯುವುದು** ತಪ್ಪಲ್ಲ.
ನೀನು **ಓದುವುದು** ಕಡಮೆ.
ಸೀತೆಯು ಈಗ **ಇಲ್ಲಿರುವುದು** ಸರಿಯಲ್ಲ.

ಈ ವಾಕ್ಯಗಳಲ್ಲಿ ಮಾಡು, ಬರೆ, ಓದು, ಇರು ಎಂಬ ಧಾತುಗಳಿಗೆ 'ವುದು' ಎಂಬ ಪ್ರತ್ಯಯವನ್ನು ಸೇರಿಸಿದೆ. ಇದರಿಂದ **ಮಾಡುವುದು, ಬರೆಯುವುದು, ಓದುವುದು, ಇರುವುದು** ಎಂಬ ರೂಪಗಳಾಗಿವೆ. ಈ ರೂಪಗಳಿಗೂ 'ಕೃದಂತ ಭಾವನಾಮಗಳು' ಅಥವಾ 'ಭಾವಕೃದಂತಗಳು' ಎಂದು ಹೆಸರು. ಈ ಪ್ರತ್ಯಯವು ಎಲ್ಲಾ ಧಾತುಗಳಿಗೂ ಹತ್ತುತ್ತದೆ.

ನಾವು ಮಾಡಿದುದು **ತಪ್ಪು**, **ತಪ್ಪನ್ನು** ಒಪ್ಪಿಕೊಳ್ಳಬೇಕು.
ನಮ್ಮೂರಿನಲ್ಲಿ ಈಸಲ **ಬೆಳೆ** ಚೆನ್ನಾಗಿದೆ.
ನಮ್ಮದು ಬಡತನದ **ಬದುಕು**.
ತಾವು ಹಿರಿಯರು. ತಮ್ಮ **ನುಡಿ** ಫಲಿಸಬೇಕು.

ಇಲ್ಲಿ **ತಪ್ಪು, ಬೆಳೆ, ಬದುಕು, ನುಡಿ** ಇವೂ ಭಾವಕೃದಂತಗಳು. ಇವುಗಳಿಗೆ ಯಾವ ಪ್ರತ್ಯಯವೂ ಸೇರಿಲ್ಲ. ಇವು ಧಾತುರೂಪದಲ್ಲಿಯೇ ಭಾವಕೃದಂತಗಳಾಗಿವೆ.

## ಅಭ್ಯಾಸ

(೧) ಭಾವಕೃದಂತವೆಂದರೇನು ? ಉದಾಹರಣೆಗಳನ್ನು ಕೊಡಿ.

(೨) ಈ ಕೆಳಗೆ ಕೊಟ್ಟಿರುವುವುಗಳಲ್ಲಿರುವ ಭಾವಕೃದಂತಗಳನ್ನು ಗುರುತಿಸಿ :—

೧. ಈ ಊರಿನಲ್ಲಿ ಹುಡುಗರು ಆಟಕ್ಕೆ ಹೆಚ್ಚು ಗಮನ ಕೊಡುತ್ತಾರೆ. ೨. ನಿನ್ನೆ ರಾತ್ರಿಯ ಸುಗ್ಗಿಯ ಕುಣಿತವು ಚೆನ್ನಾಗಿತ್ತು. ೩. ನಮ್ಮ ಕುದುರೆಗೆ ಇಲ್ಲಿ ಒಳ್ಳೆಯ ಮೇವು ಇಲ್ಲ. ೪. ತಿಳಿವಳಿಕೆ ಇಲ್ಲದವರು ಬೆರಕೆಯ ತುಪ್ಪವನ್ನು ಕೊಂಡು ಮೋಸ ಹೋಗುತ್ತಾರೆ. ೫. ಹಳ್ಳಿಗಳಲ್ಲಿ ಪೂರ್ವಕಾಲದ ಉಡಿಗೆತೊಡಿಗೆಗಳನ್ನು ಈಗಲೂ ಕಾಣಬಹುದು. ೬. ರಾಮುನ ನಡತೆ ಚೆನ್ನಾಗಿಲ್ಲ. ೭. ಬೇರೆ ಊರಿಗೆ ಹೋದಾಗ ನಮ್ಮ ಹಣಕಾಸಿನ ವಿಚಾರದಲ್ಲಿ ನಾವು ಬಹಳ ಎಚ್ಚರಿಕೆಯಿಂದಿರಬೇಕು. ೮. ಈ ಮನೆಯಲ್ಲಿ ತಿಗಣೆಯ ಕಾಟವು ಬಹಳ ಹೆಚ್ಚು. ೯. ಹಣವಂತರ ಮನೆಯ ಮದುವೆಯ ಮೆರವಣಿಗೆ ಅಂದ. ೧೦. ಬಾಲ್ಯದ ನೆನಪು. ೧೧. ಬೀಜದ ಮೊಳಕೆ. ೧೨. ಅಂದವಾದ ಬರವಣಿಗೆ. ೧೩. ಜಿಂಕೆಯ ನೆಗೆತ. ೧೪. ಗದ್ದೆಯ ಒಕ್ಕಣೆ. ೧೫. ನವರಾತ್ರಿಯ ನೋಟ.

(೩) ಇಲ್ಲಿ ಬಿಟ್ಟಿರುವ ಪದಗಳನ್ನು ಸೇರಿಸಿ :—

೧. ಆ ಮನೆಯಲ್ಲಿ ನೀರಿನ — ಹೆಚ್ಚು. ೨. ಹುಡುಗರು — ಆಡುತ್ತಾರೆ. ೩. ಈಗ ಹಸುಗಳಿಗೆ ಹೊರಗೆ — ಕಡಮೆ. ೪. ರಾತ್ರಿ ಊಟ ಮಾಡಲಿಲ್ಲ ; ಈಗ ನನಗೆ — ಹೆಚ್ಚಾಗಿದೆ. ೫. ನನಗೆ ತುಂಬಾ ತಲೆ — . ೬. ಅವಳ ತಲೆಯ ಮೇಲಿರುವ ಹುಲ್ಲಿನ — ಬಹಳ ದೊಡ್ಡದು. ೭. ರಾತ್ರಿಯ ಹೊತ್ತು ಹೊರಗೆ ಬರಲು ನನಗೆ ತುಂಬಾ — .

(೪) ಹುಟ್ಟು, ಬೆಳೆ, ಗುದ್ದು, ಕಟ್ಟು, ಒದೆ, ಬೀಳು, ನಡೆ, ನುಡಿ, ಉರಿ, ನಂಬು, ಕೆಡು, ನೋಡು, ಹೊಳೆ, ಮೊಳೆ, ನಗು, ಹಾಸು, ಸೆಳೆ, ಮರೆ, ಅರಿ—ಇವುಗಳ ಭಾವಕೃದಂತರೂಪಗಳಾವುವು ? ಇವುಗಳನ್ನು ವಾಕ್ಯದಲ್ಲಿ ಉಪಯೋಗಿಸಿ.

---

## ಪಾಠ ೨೪

### ತದ್ಧಿತಾಂತ ನಾಮಗಳು

**ಹಣವಂತರು** ಎಲ್ಲ ಕೆಲಸವನ್ನು ಮಾಡಬಲ್ಲರು.

**ಗಂಧಿಗನು** ಬಗೆಬಗೆಯ ಬೇರುನಾರುಗಳನ್ನೂ ಇತರ ಪದಾರ್ಥಗಳನ್ನೂ ಮಾರುತ್ತಾನೆ.

**ಕನ್ನಡಿಗರಲ್ಲಿ** ಒಗ್ಗಟ್ಟು ಹೆಚ್ಚಿದರೆ ಕನ್ನಡ ಭಾಷೆಯು ಏಳಿಗೆಯಾಗುವುದು.

ಬಳೆಗಾರನು ಬಳೆಗಳನ್ನು ಮಾರುತ್ತಾನೆ.

ಅವನು **ಮೋಸಗಾರ.**

**ಬೇಟೆಗಾರರು** ಕಾಡಿನಲ್ಲಿರುವ ದುಷ್ಟಮೃಗಗಳನ್ನು ಹಿಡಿಯ ಬಲ್ಲರು.

**ಹೂವಾಡಿಗನು** ಹೂವನ್ನು ಕಟ್ಟಿ ಮಾರುತ್ತಾನೆ.

**ಹಾವಾಡಿಗನು** ಹಾವನ್ನು ಆಡಿಸುತ್ತಾನೆ.

**ಮಡಿವಾಳನು** ಮೈಲಿಗೆ ಬಟ್ಟೆಗಳನ್ನು ಒಗೆಯುತ್ತಾನೆ.

**ಹತ್ತನೆಯವನು** ರಾಮು.

ಒಕ್ಕಲಗಿತ್ತಿಯು ಹೊಲಕ್ಕೆ ಹೋಗುತ್ತಿದ್ದಾಳೆ.

ಗಾಣಿಗಿತ್ತಿಯು ಎಣ್ಣೆಯನ್ನು ತಂದಿದ್ದಾಳೆ.

ಸೀತೆ **ಗುಣವಂತೆ,** ಜಾನಕಿ **ಜಾಣೆ.**

**ಮುದುಕಿಯು ಹುಡುಗಿಗೆ** ಕತೆ ಹೇಳುತ್ತಿದ್ದಾಳೆ.

ಮೇಲೆ ಕೊಟ್ಟಿರುವ ವಾಕ್ಯಗಳಲ್ಲಿ ದಪ್ಪಕ್ಷರಗಳ ಪದಗಳನ್ನು ನೋಡಿ :—

ಹಣವಂತ ಎಂಬ ಪದದಲ್ಲಿ ಹಣ+ವಂತ ಎಂಬ ಎರಡು ಭಾಗಗಳಿವೆ. 'ಹಣ' ಎಂಬುದು ನಾಮಪದ. ಇದರೊಡನೆ 'ವಂತ' ಎಂಬ ಪ್ರತ್ಯಯವು ಸೇರಿ 'ಹಣವಂತ' ಎಂದಾಗಿದೆ. 'ಹಣವಂತ' ಎಂದರೆ ಹಣವುಳ್ಳವನು ಎಂದರ್ಥವಾಗುತ್ತದೆ.

ಬಳೆಗಾರ=ಬಳೆ+**ಗಾರ**—ಇಲ್ಲಿ **ಬಳೆ** ಎಂಬ ಪದಕ್ಕೆ **ಗಾರ** ಎಂಬ ಪ್ರತ್ಯಯವು ಸೇರಿ ಬಳೆಗಾರನೆಂದಾಗಿದೆ. ಬಳೆಗಾರನೆಂದರೆ 'ಬಳೆಯನ್ನು ಮಾಡುವವನು, ಅಥವಾ ಮಾರುವವನು' ಎಂದರ್ಥ.

ಹಣ, ಬಳೆ ಮುಂತಾದ ಪದಗಳು ನಾಮಪದಗಳು ಎಂದು ನಿಮಗೆ ತಿಳಿದೇ ಇದೆ. ಈ ನಾಮಪದಗಳ ಮೇಲೆ —ವಂತ—ಗಾರ ಮುಂತಾದ ಪ್ರತ್ಯಯಗಳು ಸೇರಿ ಬೇರೆ ಅರ್ಥವುಳ್ಳ ಪದಗಳಾಗುತ್ತವೆ. ಇಂತಹ ಪ್ರತ್ಯಯಗಳಿಗೆ 'ತದ್ಧಿತ ಪ್ರತ್ಯಯಗಳು' ಎಂದು ಹೆಸರು. ಈ ಪ್ರತ್ಯಯಗಳು ಸೇರಿ ಆಗುವ ನಾಮಪದಗಳಿಗೆ 'ತದ್ಧಿತಾಂತ ನಾಮಗಳು' ಎಂದು ಹೆಸರು.

ಕೆಳಗೆ ಕೆಲವು ತದ್ಧಿತಾಂತನಾಮಗಳನ್ನೂ ಅವುಗಳಲ್ಲಿರುವ ತದ್ಧಿತ ಪ್ರತ್ಯಯಗಳನ್ನೂ ತೋರಿಸಿದೆ :—

| | | | ಪ್ರಕೃತಿ | | ಪ್ರತ್ಯಯ | ಅರ್ಥ |
|---|---|---|---|---|---|---|
| ೧. | ಹಣವಂತ | = | ಹಣ | + | ವಂತ | ಇವನಲ್ಲಿ ಉಂಟು |
| ೨. | ಕನ್ನಡಿಗ | = | ಕನ್ನಡ | + | ಇಗ | ತಿಳಿದವನು. |
| ೩. | ಬಳೆಗಾರ | = | ಬಳೆ | + | ಗಾರ | ಮಾಡುವವನು. / ಮಾರುವವನು. |
| ೪. | ಬೇಟೆಗಾರ | = | ಬೇಟೆ | + | ಗಾರ | ಆಡುವವನು. |
| ೫. | ಹೂವಾಡಿಗ | = | ಹೂವು | + | ಆಡಿಗ | ಕಟ್ಟಿ ಮಾರುವವನು. |
| ೬. | ಹಾವಾಡಿಗ | = | ಹಾವು | + | ಆಡಿಗ | ಆಡಿಸುವವನು. |
| ೭. | ಮಡಿವಾಳ | = | ಮಡಿ | + | ವಾಳ | ಮಾಡುವವನು. |
| ೮. | ಒಕ್ಕಲಿಗಿತ್ತಿ | = | ಒಕ್ಕಲಿಗ | + | ಇತ್ತಿ | ಹೆಂಗಸು. |
| | ಗಾಣಿಗಿತ್ತಿ | = | ಗಾಣಿಗ | + | ಇತ್ತಿ | ,, |
| ೯. | ಗುಣವಂತೆ | = | ಗುಣ | + | ವಂತೆ | ಉಳ್ಳವಳು |
| | ಜಾಣೆ | = | ಜಾಣ | + | ಎ | ಹೆಂಗಸು. |
| ೧೦. | ಮುದುಕಿ | = | ಮುದುಕ | + | ಇ | ,, |
| | ಹುಡುಗಿ | = | ಹುಡುಗ | + | ಇ | ,, |

## ಅಭ್ಯಾಸ

(೧) ತದ್ಧಿತಾಂತನಾಮ—ಎಂದರೇನು ?

(೨) ಈ ಕೆಳಗಿನ ಮಾತುಗಳಲ್ಲಿ ತದ್ಧಿತಾಂತನಾಮಗಳನ್ನು ಗುರುತಿಸಿ :—

ರೂಪವಂತೆ, ಕಂಚುಗಾರ, ಮಕ್ಕಳೊಂದಿಗ, ಪಾಲುಗಾರ, ಚದುರೆ, ಬ್ರಾಹ್ಮಣಿತಿ, ಕೇಡಿಗ, ದವಸಿಗ, ಹರಿಕಾರ, ಓಲೆಕಾರ, ಕುಂಬಾರಿತಿ, ಬೆಸ್ತಗಿತ್ತಿ, ಸೂಲಗಿತ್ತಿ, ಹೆಡ್ಡೆ, ಚದುರ, ಕರಿಗಿ.

(೩) ಈ ವಾಕ್ಯಗಳನ್ನು ಪೂರ್ತಿಮಾಡಿ :—

೧ ಗಂಧವನ್ನು ಮಾರುವವನು —
೨ ಕನ್ನಡವನ್ನು ತಿಳಿದವನು —
೩ ಹೂವನ್ನು ಮಾರುವವನು —
೪ ಹಣವುಳ್ಳವನು —
೫ ಮೋಸವನ್ನು ಮಾಡುವವನು —
೬ ಅರಸನ ಹೆಂಡತಿ —
೭ ಒಕ್ಕಲಿಗನ ಹೆಂಡತಿ —
೮ ಹೂವಾಡಿಗನ ಹೆಂಡತಿ —
೯ ಗಾಣಿಗನ ಹೆಂಡತಿ —
೧೦ ಬೆಸ್ತನ ಹೆಂಡತಿ —

## ಪಾಠ ೨೫

### ತದ್ಧಿತಾಂತ ಭಾವನಾಮಗಳು

೧. ನಮ್ಮ ದೇಶದಲ್ಲಿ **ಕುರುಡುತನ**ದಿಂದ ಸಂಕಟಪಡುವವರ ಸಂಖ್ಯೆಯು ಹೆಚ್ಚುತ್ತಿದೆ. ಸಿಡುಬಿನಿಂದ ಅನೇಕರಿಗೆ **ಕುರುಡುತನವು** ಬಂದಿದೆ.

೨. ಮಾದಯ್ಯನಿಗೆ ಅಗರದ **ಗೌಡಿಕೆ** ಇದೆ.

೩. ನಮ್ಮ ತಾಯಿಗೆ **ಕಿವುಡು** ; ನಗಾರಿಯನ್ನು ಹೊಡೆದಂತೆ ಮಾತನಾಡಿದರೂ ಅವರಿಗೆ ಕೇಳಿಸುವುದಿಲ್ಲ.

೪. **ಬಡತನವು** ಮನುಷ್ಯನ ಬೆಳೆವಳಿಕೆಗೆ ಮತ್ತು ವಿದ್ಯಾಭ್ಯಾಸಕ್ಕೆ ಅಡ್ಡಿಯಾಗುತ್ತದೆ.

೫. ಕಸದಿಂದಲೂ ರಸವನ್ನು ತೆಗೆದು ಜೀವನಮಾಡುವುದು **ಜಾಣತನಕ್ಕೆ** ಗುರುತು.

೬. ಈ ಕಾಗದದ ಬಣ್ಣ ಬಿಳುಪು.

ಈ ವಾಕ್ಯಗಳಲ್ಲಿ ಬರೆದಿರುವ **ಕುರುಡುತನ, ಗೌಡಿಕೆ, ಕಿವುಡು, ಬಡತನ, ಜಾಣತನ, ಬಿಳುಪು**—ಇವುಗಳು ಕುರುಡ, ಗೌಡ, ಕಿವುಡ, ಬಡವ, ಜಾಣ, ಬಿಳಿದು ಎಂಬ ಪದಗಳಿಂದ ಬಂದಿವೆ ; ಇವಕ್ಕೆ ತನ, ಇಕೆ, ಉ, ಪು — ಎಂಬ ಪ್ರತ್ಯಯಗಳು ಸೇರಿ ಕುರುಡುತನ, ಗೌಡಿಕೆ, ಕಿವುಡು, ಬಡತನ, ಜಾಣತನ, ಬಿಳುಪು — ಎಂದಾಗಿವೆ. ಇವುಗಳು ಕುರುಡ, ಗೌಡ, ಕಿವುಡ ಎಂಬ ಪದಗಳ ಹಾಗೆ ಹೆಸರುಗಳನ್ನು ಸೂಚಿಸುವುದಿಲ್ಲ. ಅವರಲ್ಲಿರುವ ಸ್ವಭಾವವನ್ನು ಅಥವಾ ಭಾವಗಳನ್ನು ತಿಳಿಸುತ್ತವೆ. ಇಂತಹ ಪದಗಳಿಗೆ 'ತದ್ಧಿತಾಂತ ಭಾವನಾಮಗಳು' ಎಂದು ಹೆಸರು.

### ಅಭ್ಯಾಸ

(೧) ತದ್ಧಿತಾಂತ ಭಾವನಾಮ — ಎಂದರೇನು ?

(೨) ಇವುಗಳಲ್ಲಿರುವ ತದ್ಧಿತಾಂತ ಭಾವನಾಮಗಳನ್ನು ಕಂಡುಹಿಡಿಯಿರಿ :—

೧. ದೊಡ್ಡತನವು ಅವರವರ ವಂಶಕ್ಕೆ ಬಂದುದು. ೨. ಅವನು ತುಂಬಾ ಕುಳ್ಳು. ೩. ಕಿವುಡನ್ನು ವಾಸಿಮಾಡಿಕೊ. ೪. ಗೌಡಿಕೆಗೆ ವಿದ್ಯೆಯೂ, ಧೈರ್ಯವೂ,

ಒಳ್ಳೆಯ ನಡತೆಯೂ ಆವಶ್ಯಕ. ೫. ಅವನ ತಂದೆಯು ತನ್ನ ಜಾಣತನದಿಂದ ಮುಂದಕ್ಕೆ ಬಂದವನು. ೬. ಇತರರ ದೂಷಣೆಗೆ ಕಿವಿಗೊಡದೆ ಎಲ್ಲರಿಗೂ ಒಳ್ಳೆಯದನ್ನು ಮಾಡುವುದು ಹಿರಿಯತನ.

(೨) ಈ ಕೆಳಗಿನ ತದ್ಧಿತಾಂತ ಭಾವನಾಮಗಳನ್ನು ವಾಕ್ಯಗಳಲ್ಲಿ ಉಪಯೋಗಿಸಿ :—ಬ್ರಾಹ್ಮಣಿಕೆ, ಕಿವುಡು, ಹೆಡ್ಡತನ, ಕಿರಿಯತನ, ಬಿಳುಪು, ದೊಡ್ಡತನ, ಕುರುಡುತನ, ಬುದ್ಧಿವಂತಿಕೆ.

---

## ಪಾಠ ೨೬

### ೧. ನಾಮವಿಶೇಷಣಗಳು

**ಧೀರನಾದ** ರಾಮನು **ದುಷ್ಟನಾದ** ರಾವಣನನ್ನು ಕೊಂದನು. **ದೊಡ್ಡ** ಮೀನುಗಳು ಸಣ್ಣ ಮೀನುಗಳನ್ನು ತಿಂದುಬಿಡುತ್ತವೆ. **ಹಿರಿಯ** ರಾಮಶಾಸ್ತ್ರಿಗಳು **ಆರು** ಶಾಸ್ತ್ರಗಳನ್ನು ಬಲ್ಲರು. **ಕರಿಯದಾದ** ಆಡು **ಹಸುರಾದ** ಹುಲ್ಲನ್ನು ಮೇಯಿತು. **ಹಿರಿಯ** ಹುಡುಗಿ **ದೊಡ್ಡ** ಪುಸ್ತಕವನ್ನು ಓದುತ್ತಾಳೆ. **ಕಿರಿಯ** ಮಗುವು ದಪ್ಪನಾದ ತಂಬಿಗೆಯನ್ನು ಎತ್ತಿತು. **ಕಿರಿಯನಾದ** ರಾಮಯ್ಯನು **ದೊಡ್ಡದಾದ** ಮನೆಯನ್ನು ಕೊಂಡುಕೊಂಡನು.

ಈ ವಾಕ್ಯಗಳಲ್ಲಿ ರಾಮನು, ಮೀನುಗಳು, ಶಾಸ್ತ್ರಿಗಳು, ಆಡು, ಹುಡುಗಿ, ಮಗು, ರಾಮಯ್ಯನು — ಇವು ಕರ್ತೃಪದಗಳು. ರಾವಣನನ್ನು, ಮೀನುಗಳನ್ನು, ಶಾಸ್ತ್ರಗಳನ್ನು, ಹುಲ್ಲನ್ನು, ಪುಸ್ತಕವನ್ನು, ತಂಬಿಗೆಯನ್ನು, ಮನೆಯನ್ನು — ಇವು ಕರ್ಮಪದಗಳು.

ಧೀರನಾದ, ದೊಡ್ಡ, ಹಿರಿಯ, ಕರಿಯದಾದ, ಹಿರಿಯ, ಕಿರಿಯ, ಕರಿಯನಾದ — ಇವು ಮೇಲೆ ಹೇಳಿರುವ ಕರ್ತೃಪದಗಳ ಆಯಾ ಗುಣವನ್ನು ತಿಳಿಸುತ್ತವೆ. ಇವು ಗುಣವಾಚಕಗಳು.

ದುಷ್ಟನಾದ, ಸಣ್ಣ, ಹಸುರಾದ, ದಪ್ಪನಾದ, ದೊಡ್ಡದಾದ — ಇವು ಕರ್ಮಪದಗಳ ಆಯಾ ಗುಣವನ್ನು ತಿಳಿಸುತ್ತವೆ. ಇವೂ ಗುಣವಾಚಕಗಳು. ಆರು ಎಂಬುದು ಸಂಖ್ಯಾವಾಚಕ.

ಹೀಗೆ ಕರ್ತೃ ಕರ್ಮಗಳ ಗುಣ, ಸಂಖ್ಯೆ ಮೊದಲಾದುವನ್ನು ತಿಳಿಸುವ ಪದಕ್ಕೆ 'ವಿಶೇಷಣ' ಎಂದು ಹೆಸರು. ವಿಶೇಷಣವು ಯಾವುದರ ಗುಣ, ಸಂಖ್ಯೆ ಮೊದಲಾದುವನ್ನು ತಿಳಿಸುತ್ತದೋ ಅದಕ್ಕೆ 'ವಿಶೇಷ್ಯ' ಎಂದು ಹೆಸರು.

ಸಾಮಾನ್ಯವಾಗಿ ವಿಶೇಷಣಗಳು ವಿಶೇಷ್ಯಗಳ ಹಿಂದೆಯೇ ಬರುತ್ತವೆ. ಮೇಲಿನ ವಾಕ್ಯಗಳಲ್ಲಿ ನಾಮಪದಗಳು ವಿಶೇಷ್ಯಗಳಾಗಿವೆ. ವಿಶೇಷಣಗಳು ನಾಮಪದಗಳ ಹಿಂದಿವೆ. ಇವಕ್ಕೆ 'ನಾಮವಿಶೇಷಣಗಳು' ಎಂದು ಹೆಸರು. Adjectives qualify nouns.

**ಧೀರನಾದ** ರಾಮನು **ದುಷ್ಟನಾದ** ರಾವಣನನ್ನು ಕೊಂದನು. **ಕರಿಯದಾದ** ಆಡು **ಹಸುರಾದ** ಹುಲ್ಲನ್ನು ಮೇಯುತ್ತಿದೆ. **ಕಿರಿಯನಾದ** ರಾಮಯ್ಯನು **ದೊಡ್ಡದಾದ** ಮನೆಯನ್ನು ಕೊಂಡುಕೊಂಡನು. **ಕಿರಿಯದಾದ** ಮಗು **ದಪ್ಪವಾದ** ತಂಬಿಗೆಯನ್ನು ಎತ್ತುತ್ತದೆ. **ಧೈರ್ಯವುಳ್ಳ** ಮನುಷ್ಯನು ಸುಖವಾಗಿ ಬದುಕುತ್ತಾನೆ. **ಬುದ್ಧಿವಂತನಾದ** ಹುಡುಗ ಎಲ್ಲರನ್ನೂ ಮೆಚ್ಚಿಸುತ್ತಾನೆ. **ವೈಶಂಪಾಯನನೆಂಬ** ಋಷಿಯು ಕಥೆಯನ್ನು ಹೇಳಿದನು. **ಹಿಡಿಂಬಿಯೆಂಬ** ರಾಕ್ಷಸಿಯನ್ನು ಭೀಮನು ಮದುವೆಯಾದನು.

ಮೇಲಿನ ವಾಕ್ಯಗಳಲ್ಲಿ ಧೀರನಾದ, ಕರಿಯನಾದ, ಕಿರಿಯನಾದ, ಕಿರಿಯದಾದ, ಧೈರ್ಯವುಳ್ಳ, ಬುದ್ಧಿವಂತನಾದ, ವೈಶಂಪಾಯನನೆಂಬ, ಹಿಡಿಂಬಿಯೆಂಬ — ಎಂಬುವು ರಾಮನು, ಆಡು, ರಾಮಯ್ಯನು, ಮಗು, ಮನುಷ್ಯ, ಹುಡುಗ ಎಂಬ ಕರ್ತೃಪದಗಳ ಗುಣವನ್ನು ತಿಳಿಸುತ್ತವೆ. ಆದ್ದರಿಂದ ಇವು ನಾಮವಿಶೇಷಣಗಳು. ಆದ, ಉಳ್ಳ, ಎಂಬ ಇವು ಪ್ರಥಮಾವಿಭಕ್ತಿಯ ನಾಮಪದಗಳಿಗೆ ಸೇರಿ ಈ ನಾಮವಿಶೇಷಣಗಳಾಗಿವೆ. ಇವು ಯಾವಾಗಲೂ ವಿಶೇಷ್ಯಕ್ಕೆ ಹಿಂದೆಯೇ ಬರುತ್ತವೆ.

**ಬಂದ** ಕಾಗದವನ್ನು ಓದು. **ಕೊಟ್ಟ** ಹಣವನ್ನು ಕೇಳು. **ಬರುವ** ವರ್ಷ ನನ್ನ ಅದೃಷ್ಟವು ಬದಲಾಯಿಸಬಹುದು. ಇದು ಮನೆಗೆ **ಹೋಗುವ** ದಾರಿ.

ಮೇಲಿನ ವಾಕ್ಯಗಳಲ್ಲಿ ಬಂದ, ಕೊಟ್ಟ, ಬರುವ, ಹೋಗುವ ಎಂಬ ಕೃದಂತಗಳು ಕಾಗದವನ್ನು, ಹಣವನ್ನು, ವರ್ಷ, ದಾರಿ ಎಂಬ ನಾಮಪದಗಳ ಹಿಂದೆ ಬಂದು ವಿಶೇಷಣಗಳಾಗಿವೆ. ಇಲ್ಲಿ ಕೃದಂತಗಳು ನಾಮವಿಶೇಷಣಗಳಾಗಿವೆ.

ಮೇಲೆ ಹೇಳಿರುವುದರಿಂದ ಆದ, ವುಳ್ಳ, ಎಂಬ — ಎಂಬುದರಿಂದ ಕೊನೆಯಾಗುವ ಪದಗಳೂ ಗುಣವಾಚಕವೂ ಕೃದಂತವೂ ವಿಶೇಷಣಗಳಾಗಿವೆ ಎಂಬುದು ತಿಳಿಯುತ್ತದೆ. ಇವು 'ನಾಮವಿಶೇಷಣಗಳು' ಎನಿಸಿಕೊಳ್ಳುತ್ತವೆ.

## ಅಭ್ಯಾಸ

(೧) ವಿಶೇಷಣ, ವಿಶೇಷ್ಯ—ಎಂದರೇನು? ವಿಶೇಷಣವು ಎಲ್ಲಿ ಬರುತ್ತದೆ?

(೨) ಕೆಳಗಿನ ವಾಕ್ಯಗಳಲ್ಲಿ ವಿಶೇಷ್ಯಗಳಿಗೆ ತಕ್ಕ ವಿಶೇಷಣಗಳನ್ನು ಸೇರಿಸಿ:—

೧. ಬಿಸಿಲಿಗೆ ಬಾಳೆಯು ಬಾಡುತ್ತದೆ. ೨. ಹಾಲನ್ನು ಕುಡಿದರೆ ನಾಲಗೆ ಸುಡುತ್ತದೆ. ೩. ನೀರಿನಲ್ಲಿ ಮುಳುಗಿದರೆ ಚಳಿಯಾಗುತ್ತದೆ. ೪. ಮಲ್ಲಿಗೆಯನ್ನು ಮುಡಿದರೆ ಅಂದವಾಗಿರುತ್ತದೆ. ೫. ಹೊರೆಯನ್ನು ಹೊತ್ತರೆ ಕತ್ತು ಉಳುಕುತ್ತದೆ.

(೩) ಈ ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿರುವ ನಾಮವಿಶೇಷಣಗಳನ್ನು ತಿಳಿಸಿ :—ಅವು ನಾಮಪದ, ಗುಣವಾಚಕ, ಕೃದಂತ ಇವುಗಳಲ್ಲಿ ಯಾವುದೆಂಬುದನ್ನು ತಿಳಿಸಿ :—

ರೆಕ್ಕೆಯುಳ್ಳ ಪ್ರಾಣಿಗಳು ಆಕಾಶದಲ್ಲಿ ಹಾರುತ್ತವೆ. ವಿವೇಕಿಯಾದ ವಿಭೀಷಣನ ಮಾತುಗಳು ದುಷ್ಟನಾದ ರಾವಣನಿಗೆ ರುಚಿಸಲಿಲ್ಲ. ಜಿಂಕೆಯಾಗಿದ್ದ ಮಾರೀಚನನ್ನು ರಾಮನು ಕೊಂದನು. ಹಣವುಳ್ಳ ಜನರು ಬಡವರಿಗೆ ಕಷ್ಟಬಂದಾಗ ಸಹಾಯಮಾಡಬೇಕು. ಮೈಸೂರೆಂಬ ನಗರದಲ್ಲಿ ಶ್ರೀಮನ್ಮಹಾರಾಜರವರು ವಾಸಮಾಡುತ್ತಾರೆ. ಜರಾಸಂಧನೆಂಬ ರಾಜನು ಕೃಷ್ಣನ ತಂತ್ರದಿಂದ ಮಡಿದನು. ಆಡುವ ಮಕ್ಕಳ ನೆವದಲ್ಲಿ ದೊಡ್ಡವರು ಜಗಳಕ್ಕೆ ಹೊರಡಬಾರದು. ಕೆಂಪಾದ ಬಟ್ಟೆಯನ್ನು ಕಂಡರೆ ಹಸುವೂ, ಕುದುರೆಯೂ ಬೆದರುವುವು. ಹೊಂಗೆಯ ಮರದ ತಣ್ಣಗಿರುವ ನೆರಳಿನಲ್ಲಿ ಬಳಲಿದ್ದ ಜಪಾನನು ಮಲಗಿದ್ದನು. ಅಮರಾವತಿಯೆಂಬ ನಗರದಲ್ಲಿ ಇಂದ್ರನೆಂಬ ರಾಜನಿದ್ದನು.

(೪) ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಸೇರಿಸಿ ಬರೆಯಿರಿ :—

೧. — ಹುಡುಗರು ಮನೆಯ ಮೇಲೆ ಕಲ್ಲೆಸೆಯುತ್ತಾರೆ. ೨. — ಜನರು ಸೇರಿದರೆ — ಕಷ್ಟಕೆಲಸವೂ ಸಾಧ್ಯ. ೩. ಶಿಶಿರಋತುವಿನಲ್ಲಿ — ಎಲೆಗಳು ಉದುರುತ್ತವೆ. ೪. — ಬಟ್ಟೆಗಳನ್ನು ಅಗಸನಿಗೆ ಹಾಕು. ೫. ಉಪಕಾರ — ಜನರನ್ನು ಎಂದಿಗೂ ಮರೆಯಬೇಡ. ೬. ಭರತ —ಅರಸನ ಹೆಂಡತಿಯು ಗಂಗಾನದಿಯಲ್ಲಿ ಸ್ನಾನಮಾಡಿದಳು. ೭. ಕಡಪಾ ಡಿಸ್ಟ್ರಿಕ್ಟಿನಲ್ಲಿರುವ ಪೆರೂರು — ಊರಿನಲ್ಲಿ ಸಿಂಹನಂದಿ — ಜೈನರ ಮುನಿ ಇದ್ದನು.

———

## ಪಾಠ ೨೭

### ೨. ಕ್ರಿಯಾ ವಿಶೇಷಣಗಳು Adverbs

೧

ರಾಕ್ಷಸನು **ಬಾಣದಿಂದ** ಹೊಡೆದನು.

ಅದು ಲಕ್ಷ್ಮಣನ **ಎದೆಗೆ** ತಗುಲಿತು.

ಅದರಿಂದಾದ ಗಾಯದಿಂದ ಲಕ್ಷ್ಮಣನು **ನೆಲದಲ್ಲಿ** ಬಿದ್ದನು.

ಕೂಡಲೆ ಲಕ್ಷ್ಮಣನು ಮೂರ್ಛೆಹೋದನು; ಕೋಟೆಯ **ಬಾಗಿಲಿನಲ್ಲಿ** ಶತ್ರುಗಳು ಬಹಳ **ಪರಾಕ್ರಮದಿಂದ** ಕಾದಿದರು.

ಮೇಲಿನ ವಾಕ್ಯಗಳಲ್ಲಿ ಬಾಣದಿಂದ, ಎದೆಗೆ, ನೆಲದಲ್ಲಿ, ಬಾಗಿಲಿನಲ್ಲಿ, ಪರಾಕ್ರಮದಿಂದ —ಇವು ಕ್ರಿಯಾಪದವು ಸೂಚಿಸುವ ಕೆಲಸವು 'ಎಲ್ಲಿ ನಡೆಯಿತು? ಹೇಗೆ ನಡೆಯಿತು? ಯಾವಾಗ ನಡೆಯಿತು?' ಎಂಬುದನ್ನು ತಿಳಿಸುತ್ತವೆ. ಇವುಗಳಲ್ಲಿ **ಬಾಣದಿಂದ, ಪರಾಕ್ರಮದಿಂದ** ಎಂಬುವು ತೃತೀಯಾವಿಭಕ್ತಿಯ ನಾಮಪದಗಳು. ಎದೆಗೆ ಎಂಬುದು ಚತುರ್ಥೀವಿಭಕ್ತಿಯ ನಾಮಪದ. **ನೆಲದಲ್ಲಿ, ಬಾಗಿಲಿನಲ್ಲಿ** —ಇವು ಸಪ್ತಮೀವಿಭಕ್ತಿಯ ನಾಮಪದಗಳು.

ಇವುಗಳು ವಿಭಕ್ತ್ಯಂತ ನಾಮಪದಗಳು. ಇವು ಕ್ರಿಯೆ ಎಲ್ಲಿ ನಡೆಯಿತು? ಹೇಗೆ ನಡೆಯಿತು? ಯಾವಾಗ ನಡೆಯಿತು? ಎಂಬುದನ್ನು ತಿಳಿಸಿ ಕ್ರಿಯೆಯನ್ನು ವಿಶೇಷಿಸುತ್ತವೆ.

ಈ ಪದಗಳಿಗೆ 'ಕ್ರಿಯಾವಿಶೇಷಣಗಳು' ಎಂದು ಹೆಸರು.

೨

ಈ ಪಾಠವು **ಸುಲಭವಾಗಿ** ಇದೆ.

ಮೈಸೂರಿನಲ್ಲಿ ಬಡವರು ಜೀವಿಸುವುದು **ಕಷ್ಟವಾಗಿ** ಇದೆ.

ಚೆನ್ನಾಗಿ ಬದುಕೆಂದು ಹೇಳುವವರ ಮಾತು ಹುಡುಗರಿಗೆ **ಕಹಿಯಾಗಿರುತ್ತದೆ.**

ಈ ಊರಿಗೆ ಬಂದಿರುವ ಉಪಾಧ್ಯಾಯರು **ಒಳ್ಳೆಯವರಾಗಿ** ಕಾಣುತ್ತಾರೆ.

ಕತ್ತಲೆಯಲ್ಲಿ ಮಗುವು **ಧೈರ್ಯವಾಗಿ** ಹೋಗುತ್ತಿದೆ.

ಹುಡುಗಿಯು ಹೇಳಿದ ಹಾಡು **ಚೆನ್ನಾಗಿ** ಇದೆ.

ಇಂತಹ ಕೂಗಾಟಗಳು ನಮ್ಮ ಬೀದಿಯಲ್ಲಿ **ಸಾಮಾನ್ಯವಾಗಿ** ಇವೆ.

ಬೀಜವನ್ನು **ಕಾಪಾಡುವುದಕ್ಕಾಗಿ** ಕಾಯಿಗೆ ಸಿಪ್ಪೆ ಮತ್ತು ತಿರುಳು ಇರುವುವು.

ಮೇಲಿನ ವಾಕ್ಯಗಳಲ್ಲಿ ದಪ್ಪಕ್ಷರಗಳು ಸುಲಭವಾಗಿ, ಕಷ್ಟವಾಗಿ, ಕಹಿಯಾಗಿ, ಒಳ್ಳೆಯವರಾಗಿ, ಧೈರ್ಯವಾಗಿ, ಚೆನ್ನಾಗಿ, ಸಾಮಾನ್ಯವಾಗಿ, ಕಾಪಾಡುವುದಕ್ಕಾಗಿ — ಎಂಬ ಪದಗಳು ಕ್ರಿಯಾಪದವನ್ನು ತಮ್ಮ ಅರ್ಥಗಳಿಂದ (ಹಿಂದೆ ಹೇಳಿರುವ ಬಾಣದಿಂದ, ಎದೆಗೆ ಮುಂತಾದ ವಿಭಕ್ತ್ಯಂತ ನಾಮಪದಗಳ ಹಾಗೆಯೇ) ವಿಶೇಷಿಸುತ್ತವೆ.

**ಆಗಿ** ಎಂಬುದನ್ನು ನಾಮಪದಗಳಿಗೆ ಸೇರಿಸಿದರೆ ಈ ಶಬ್ದರೂಪಗಳು ಆಗುತ್ತವೆ. ‘ ಆಗಿ ’ ಎಂಬುದು ಕೊನೆಯಲ್ಲಿರುವ ಈ ಪದಗಳು ಕ್ರಿಯೆಯನ್ನು ವಿಶೇಷಿಸುವುದರಿಂದ ಇವಕ್ಕೂ ‘ ಕ್ರಿಯಾವಿಶೇಷಣಗಳು ’ ಎಂದು ಹೆಸರು.

೩

ಮೊಗ್ಗು **ಅರಳಿ** ಹೂವಾಗುವುದು. ಹೂಗಳ ಬಣ್ಣವನ್ನು **ನೋಡಿ ಮೋಹಗೊಂಡು** ಚಿಟ್ಟೆ ಮೊದಲಾದುವು ಅಲ್ಲಿ **ಬಂದು** ಕುಳಿತುಕೊಳ್ಳುತ್ತವೆ.

ತುಂಗಾ, ಭದ್ರಾ ಎಂಬ ಎರಡು ನದಿಗಳು **ಸೇರಿ** ತುಂಗಭದ್ರಾ ಎಂಬ ನದಿಯಾಗುತ್ತದೆ.

ಈಗ ಮಳೆ **ಹೊಯ್ದರೆ** ಬೆಳೆ ಹುಲುಸಾಗುತ್ತದೆ. ಸೂರ್ಯನು **ಹುಟ್ಟಿ** ಬೆಳಕಾಯಿತು.

ಈ ವಾಕ್ಯಗಳಲ್ಲಿ ಅರಳಿ, ನೋಡಿ, ಮೋಹಗೊಂಡು, ಬಂದು, ಸೇರಿ, ಹೊಯ್ದರೆ, ಹುಟ್ಟಿ — ಇವು ಕೃದಂತಗಳು. ಇವು ಕೆಲಸವು ಮುಗಿಯಲಿಲ್ಲವೆಂಬುದನ್ನು ಸೂಚಿಸುತ್ತವೆ; ಮತ್ತು ಮುಂದೆ ಬರುವ ಕ್ರಿಯಾಪದವನ್ನು ವಿಶೇಷಿಸುತ್ತವೆ. ಹೀಗೆ ಇವು ಕ್ರಿಯಾಪದವನ್ನು

ವಿಶೇಷಿಸುವುದರಿಂದ ವಾಕ್ಯದ ಅರ್ಥವು ಸಂಪೂರ್ಣವಾಗುವುದು. ಇವಕ್ಕೂ 'ಕ್ರಿಯಾವಿಶೇಷಣಗಳು' ಎಂದು ಹೆಸರು.

೪

ನೀನು **ಯಾವಾಗಲೂ** ಆಟವಾಡದೆ ಓದುತ್ತೀಯೆ. ನಾನು **ಆಗಲೇ** ಬಂದೆ. ರಾಮನು **ಈಗಲೇ** ಊರಿಗೆ ಹೊರಡಬೇಕು. ಮಳೆ ಬರುವಹಾಗಿದೆ, **ಬೇಗ** ಮನೆಗೆ ಹೋಗು. ನಮ್ಮೂರ ಗುಡಿಯ **ಸುತ್ತಲೂ** ಎತ್ತರವಾದ ಗೋಡೆ ಇದೆ. ತಲೆ ಎತ್ತಿ **ಹಾಗೆ** ನಿಲ್ಲು. ಈ ಹೂವು **ಬೆಳ್ಳಗೆ** ಇದೆ.

ಈ ಮೇಲಿನ ವಾಕ್ಯಗಳಲ್ಲಿ ದಪ್ಪಕ್ಷರಗಳಿರುವ ಯಾವಾಗಲೂ ಆಗಲೇ, ಈಗಲೇ, ಬೇಗ, ಸುತ್ತಲೂ, ಹಾಗೆ, ಬೆಳ್ಳಗೆ — ಈ ಪದ ಗಳೆಲ್ಲವೂ ಕ್ರಿಯೆಯನ್ನು ವಿಶೇಷಿಸುತ್ತವೆ. ಇವು ಅವ್ಯಯಗಳು. ಇವೂ 'ಕ್ರಿಯಾ ವಿಶೇಷಣಗಳು'.

ತೃತೀಯಾ, ಚತುರ್ಥೀ, ಸಪ್ತಮೀ ವಿಭಕ್ತಿಪ್ರತ್ಯಯಗಳಿಂದ ಕೂಡಿದ ನಾಮಪದಗಳೂ, 'ಆಗಿ' ಎಂಬ ಪದದಿಂದ ಕೂಡಿದ ನಾಮ ಪದಗಳೂ, ಅಸಂಪೂರ್ಣ ಕ್ರಿಯೆಗಳೂ, ಕೆಲವು ಅವ್ಯಯಗಳೂ ಕ್ರಿಯೆಯನ್ನು ವಿಶೇಷಿಸಿ, ಕ್ರಿಯೆಯ ಹಿಂದಿದ್ದು ಕ್ರಿಯಾವಿಶೇಷಣ ಗಳಾಗುವುವು.

## ಅಭ್ಯಾಸ

(೧) ಕ್ರಿಯಾವಿಶೇಷಣಗಳೆಂದರೇನು? ಇವಕ್ಕೂ ನಾಮವಿಶೇಷಣಗಳಿಗೂ ಇರುವ ವ್ಯತ್ಯಾಸವನ್ನು ಉದಾಹರಣೆಗಳೊಡನೆ ತಿಳಿಸಿ.

(೨) ಈ ಕೆಳಗಿನ ವಾಕ್ಯಗಳಲ್ಲಿರುವ ಕ್ರಿಯಾವಿಶೇಷಣಗಳನ್ನು ಗುರುತಿಸಿ:—

ಒಂದೂರಿನಲ್ಲಿ ಒಂದು ಬೆಕ್ಕು ಇತ್ತು. ಅದು ಆ ಊರಿನ ಇಲಿಗಳನ್ನು ದಿನ ಒಂದಕ್ಕೆ ಹತ್ತು ಇಪ್ಪತ್ತರಂತೆ ಹಿಡಿದು ತಿನ್ನುತ್ತಿತ್ತು. ಇಲಿಗಳು ಬಿಲದಿಂದ ಹೊರಕ್ಕೆ ತಲೆಹಾಕುವುದೊಂದೇ ತಡ, ಗಬಕ್ಕನೆ ಬೆಕ್ಕು ಬಂದು ಅವುಗಳನ್ನು ಹಿಡಿದು ತಿನ್ನುತ್ತಿತ್ತು. ಹೀಗಾಗಿ ಇಲಿಗಳು ಹೊರಗೆ ಬರಲಾರದೆ, ಆಹಾರಸಾಮಗ್ರಿಗಳು ದೊರೆಯದೆ ಅವು ಸಾಯುವ ಕಾಲ ಬಂತು. ಬೆಕ್ಕಿನ ಕಾಟದಿಂದ ತಪ್ಪಿಸಿಕೊಳ್ಳುವುದಕ್ಕೆ ಉಪಾಯ ತಿಳಿಯಲಿಲ್ಲ. ಆಗ ಇಲಿಗಳೆಲ್ಲಾ ಸೇರಿ ಒಂದು ಸಭೆ ಮಾಡಿದುವು. ಆ ಸಭೆಯಲ್ಲಿ ಬಹುಕಾಲ ಚರ್ಚೆ ನಡೆಯಿತು. ಆದರೆ ಯುಕ್ತವಾದ ಆಲೋಚನೆಯನ್ನು ಯಾರೂ ಹೇಳಲಿಲ್ಲ. ಆಗ ಒಂದು ಸಣ್ಣ ಇಲಿಯು ಎದ್ದು ನಿಂತುಕೊಂಡಿತು. 'ಪ್ರಾಜ್ಞರೇ

ಹೀಗೆ ವ್ಯಥಾ ಕಾಲ ಕಳೆಯುವುದರಿಂದ ಬಂದ ಲಾಭವೇನು! ಏನಾದರೂ ಒಂದು ಯುಕ್ತಿಯನ್ನು ಹುಡುಕಿ ನಾವು ಈ ಶತ್ರುವಿನ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳಬೇಕು. ಅದು ಕುತ್ತಿಗೆಗೆ ಒಂದು ಚಿಕ್ಕಗಂಟೆಯನ್ನು ಕಟ್ಟಿಬಿಡೋಣ. ಅದು ನಡೆಯುವಾಗ ಗಂಟೆಯು ಸದ್ದುಮಾಡುತ್ತದೆ. ಆಗ ನಾವು ಎಚ್ಚರಿಕೆ ಹೊಂದಿ ಬಿಲವನ್ನು ಸೇರಿ ಸುರಕ್ಷಿತವಾಗಿ ಬಾಳಬಹುದು' ಎಂದಿತು.

(೩) ಈ ಕೆಳಗಿನ ವಾಕ್ಯಗಳಲ್ಲಿ ಗೀಟಿರುವ ಕಡೆ ಉಚಿತವಾದ ಕ್ರಿಯಾವಿಶೇಷಣಗಳನ್ನು ಸೇರಿಸಿ :—

ಕಾಳಿದಾಸನನ್ನು — ಭವಭೂತಿಯೇ ಸಂಸ್ಕೃತ ಕವಿಗಳಲ್ಲಿ ಮೊದಲನೆಯವನಾಗಿದ್ದಾನೆ. ಪಾತ್ರವನ್ನು — ದಾನವಾಡು. ಕೆಲವು ಹಣ್ಣುಗಳು — ಇರುತ್ತವೆ. — ರಾಗಿ, ಹುರುಳಿ, ಬತ್ತ, ಜೋಳ ಮುಂತಾದವುಗಳನ್ನು ಉಪಯೋಗಿಸುತ್ತಾರೆ. ಎಲೆಗಳು ಮರದಿಂದಲೇ — ಬೀಳುವುವು. ಮರಗಳಿಂದ ಬಿದ್ದ ಕಾಯಿಗಳು ಸಮುದ್ರದಲ್ಲಿ — ಸಮುದ್ರತೀರವನ್ನಾಗಲಿ, ದ್ವೀಪದ ಭಾಗವನ್ನಾಗಲಿ ಸೇರುವುವು.

ಮಧುರೆಯ ನಾಯಕನು ಮೈಸೂರನ್ನು — ಗೆಲ್ಲಬಹುದೆಂದು ತಿಳಿದು ಯುದ್ಧಕ್ಕೆ ಬಂದನು.

ತಿರುಪತಿ ವೆಂಕಟರಮಣಸ್ವಾಮಿಗೆ — ಸೇವೆಯನ್ನು ಮಾಡಿದರು.

ಶಿಮನಪಲ್ಲಿ. ಸರಳಲಕ್ಷ್ಮಿಯ ಪುಸ್ತ

## ಪಾಠ ೨೮

## ಪದಗಳ ಕ್ರಮ

ಸೂರ್ಯನು ಹೊಳೆಯುತ್ತಾನೆ.
ಹೊಳೆಯು ಹರಿಯುತ್ತದೆ.
ರಾಮನು ರಾವಣನನ್ನು ಕೊಂದನು.
ಹುಡುಗಿಯು ಹಾಡನ್ನು ಹಾಡಿದಳು.

ಈ ವಾಕ್ಯಗಳಲ್ಲಿ ಮೊದಲು ಕರ್ತೃಪದ ಆಮೇಲೆ ಕರ್ಮಪದ, ಕೊನೆಯಲ್ಲಿ ಕ್ರಿಯಾಪದ—ಹೀಗಿದೆ. ಇದೇ ರೀತಿಯಲ್ಲಿಯೇ ವಾಕ್ಯಗಳನ್ನು ರಚಿಸಬೇಕು.

| | |
|---|---|
| ಹುಡುಗನು ಓದುತ್ತಾನೆ | ಪುಲ್ಲಿಂಗ |
| ಹುಡುಗಿಯು ಹಾಡಿದಳು | ಸ್ತ್ರೀಲಿಂಗ |
| ಹೊಳೆಯು ಹರಿಯುತ್ತದೆ | ನಪುಂಸಕಲಿಂಗ |

ಮೇಲಿನ ವಾಕ್ಯಗಳಲ್ಲಿ ಕರ್ತೃವು ಯಾವ ಲಿಂಗದಲ್ಲಿದೆಯೋ ಕ್ರಿಯೆಯೂ ಅದೇ ಲಿಂಗದಲ್ಲಿದೆ.

| | |
|---|---|
| ಹಕ್ಕಿ ಹಾರುತ್ತದೆ | ಏಕವಚನ |
| ಹಕ್ಕಿಗಳು ಹಾರುತ್ತವೆ | ಬಹುವಚನ |

ಇಲ್ಲಿ ಕರ್ತೃವಿನ ವಚನವೇ ಕ್ರಿಯೆಗೂ ಬಂದಿದೆ.

ಕರ್ತೃವಿನ ಲಿಂಗವಚನಗಳೇ ಕ್ರಿಯೆಗೂ ಬರುವುವು.

ಬಂಡಿಗಳೂ ಆಳುಗಳೂ ಬಂದರು (ಪುಲ್ಲಿಂಗ)
ಆಳುಗಳೂ ಬಂಡಿಗಳೂ ಬಂದುವು.

**ಈ ವಾಕ್ಯಗಳಲ್ಲಿ ಕೊನೆಯ ಕರ್ತೃವಿನ ಲಿಂಗವೇ ಕ್ರಿಯೆಗೂ ಬಂದಿದೆ.**

ರಾಮನೂ ಸೀತೆಯೂ ಬಂದರು.
ಗುರುವೂ ಶಿಷ್ಯರೂ ಬಂದರು.

ಮೇಲೆ ಹೇಳಿದ ಎರಡು ವಾಕ್ಯಗಳಲ್ಲಿ ಬೇರೆ ಬೇರೆ ವಚನದ ಹಲವು ಕರ್ತೃಗಳಿರುವುವು. ಕ್ರಿಯೆಯು ಬಹುವಚನದಲ್ಲಿದೆ.

**ಬೇರೆ ಬೇರೆ ಲಿಂಗದ ಹಲವು ಕರ್ತೃಗಳಿದ್ದರೆ ಕ್ರಿಯಾಪದವು ಕೊನೆಯ ಪದದ ಲಿಂಗವನ್ನೇ ಅನುಸರಿಸುವುದು.** ಬೇರೆ ಬೇರೆ ವಚನದ ಹಲವು ಕರ್ತೃಗಳಿದ್ದರೆ ಕ್ರಿಯೆಯು ಬಹುವಚನದಲ್ಲಿರುವುದು.

| | |
|---|---|
| ಪ್ರಥಮ ಪುರುಷ | ಅವನು ಬಂದನು |
| ಮಧ್ಯಮ ,, | ನೀನು ಬರುತ್ತೀಯೆ |
| ಉತ್ತಮ ,, | ನಾನು ಬರುತ್ತೇನೆ |

ಇಲ್ಲಿ ಕರ್ತೃವಿನ ಪುರುಷವೇ ಕ್ರಿಯೆಗೂ ಬಂದಿದೆ.

ನಾನೂ ನೀನೂ ಬಂದೆವು
ನಾನೂ ಅವನೂ ಹೋದೆವು

ಉತ್ತಮ ಪುರುಷದೊಡನೆ ಮಧ್ಯಮ, ಪ್ರಥಮ ಪುರುಷದ ಕರ್ತೃಗಳು ಬಂದಿವೆ. ಕ್ರಿಯೆಯು ಉತ್ತಮ ಪುರುಷದಲ್ಲಿಯೇ ಇದೆ.

ಅವನೂ ನೀನೂ ಜಗಳವಾಡಿದಿರಿ.

ಮಧ್ಯಮ ಪುರುಷದೊಡನೆ ಪ್ರಥಮ ಪುರುಷದ ಕರ್ತೃ ಬಂದಿದೆ ಕ್ರಿಯೆಯು ಮಧ್ಯಮ ಪುರುಷದಲ್ಲಿದೆ.

(ಅ) ಕರ್ತೃವಿನ ಪುರುಷವೇ ಕ್ರಿಯೆಗೂ ಬರುವುದು.

(ಆ) ಉತ್ತಮ ಪುರುಷದೊಡನೆ ಬೇರೆ ಪುರುಷದ ಶಬ್ದಗಳು ಸೇರಿ ಕರ್ತೃವಾದರೆ ಕ್ರಿಯೆ ಉತ್ತಮಪುರುಷದಲ್ಲಿ ಇರುವುದು.

(ಇ) ಮಧ್ಯಮ ಪುರುಷವೂ ಪ್ರಥಮ ಪುರುಷವೂ ಸೇರಿ ಕರ್ತೃ ಆದರೆ ಕ್ರಿಯೆ ಮಧ್ಯಮ ಪುರುಷದಲ್ಲಿರುವುದು.

## ಅಭ್ಯಾಸ

(೧) ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯೆಗಳ ಸ್ಥಾನವನ್ನು ತಿಳಿಸಿ, ಕ್ರಿಯೆ ಯಾವುದನ್ನನುಸರಿಸುವುದು ?

(೨) ಈ ವಾಕ್ಯಗಳಲ್ಲಿರುವ ತಪ್ಪುಗಳನ್ನು ತಿದ್ದಿ ಬರೆಯಿರಿ :—

೧. ಹುಡುಗನು ಓದುತ್ತದೆ. ೨. ಲಕ್ಷ್ಮಿಯು ಆಡುತ್ತಾನೆ. ೩. ಗುರುಗಳು ಪಾಠ ಹೇಳುತ್ತಾಳೆ. ೪. ಕುದುರೆಗಳು ಓಡುತ್ತಾರೆ. ೫. ಅವಳು ಹಾಡಲಾರವು. ೬. ಪಕ್ಷಿ ಹಾರಬಲ್ಲನು. ೭. ನಾನು ಬರುತ್ತೀಯೆ. ೮. ನೀನೂ ನಾನೂ ಹೋಗುತ್ತೀರಿ. ೯. ಅವನೂ ನೀನೂ ಬರುತ್ತಾರೆ. ೧೦. ರಾಮನೂ ನೀನೂ ನಾನೂ ಹೋದರು.

(೩) ಗೀಟಿರುವ ಕಡೆ ಸರಿಯಾದ ಪದಗಳನ್ನು ಸೇರಿಸಿ :—

೧. ಸೂರ್ಯನು ಹಗಲಲ್ಲಿ ——— . ೨. ಪಕ್ಷಿಗಳು ಆಕಾಶದಲ್ಲಿ ——— ೩. ಬ್ರಾಹ್ಮಣರು ನದಿಯಲ್ಲಿ ——— . ೪. ರೈತನು ಹೊಲವನ್ನು ——— ೫. ಮಗು ತೊಟ್ಟಿಲಲ್ಲಿ ———. ೬. ಹುಡುಗಿ ಬೀದಿಯಲ್ಲಿ ———. ೭. ——— ರಾತ್ರಿಯಲ್ಲಿ ಹೊಳೆಯುತ್ತಾನೆ. ೮. ——— ನೀರಿನಲ್ಲಿ ಜೀವಿಸುತ್ತವೆ. ೯. ——— ಪಟವನ್ನು ಬರೆಯುತ್ತಾನೆ. ೧೦. — ಪಾಠವನ್ನು ಹೇಳುತ್ತಾರೆ.

---

## ಪಾಠ ೨೯

## ಪದಸ್ಥಿತಿ Parsing

ವಾಕ್ಯಗಳಲ್ಲಿರುವ ಪದಗಳನ್ನು ಬಿಡಿಸಿ, ಅವುಗಳ ಸ್ವರೂಪವನ್ನು ತಿಳಿಸುವುದಕ್ಕೆ ಪದಸ್ಥಿತಿ ಎಂದು ಹೆಸರು.

ಇಲ್ಲಿ ಒಂದು ವಾಕ್ಯವನ್ನು ಬಿಡಿಸಿ ಪದಸ್ಥಿತಿಯನ್ನು ವಿವರಿಸಿದೆ.

ವಾಕ್ಯ :—' ಮಳೆಗಾಲದಲ್ಲಿ ಮೋಡಗಳು ಭೂಮಿಗೆ ಮಳೆಯನ್ನು ಕರೆಯುವುವು. '

ಪದಸ್ವರೂಪ :— ಮಳೆಗಾಲದಲ್ಲಿ—ನಾಮಪದ, ನಪುಂಸಕಲಿಂಗ ಏಕವಚನ, ಸಪ್ತಮೀವಿಭಕ್ತಿ.

ಮೋಡಗಳು—ನಾಮಪದ, ವಸ್ತುವಾಚಕ, ನಪುಂಸಕಲಿಂಗ, ಬಹುವಚನ, ಪ್ರಥಮಾವಿಭಕ್ತಿ ಇದೇ ಕರ್ತೃಪದ.

ಮಳೆಯನ್ನು — ನಾಮಪದ, ವಸ್ತುವಾಚಕ, ನಪುಂಸಕಲಿಂಗ, ದ್ವಿತಿಯಾವಿಭಕ್ತಿ, ಏಕವಚನ, ಇದೇ ಕರ್ಮಪದ.

ಕರೆಯುವುವು — ಕ್ರಿಯಾಪದ, ಸಕರ್ಮಕ, ಭವಿಷ್ಯತ್ಕಾಲ, ಪ್ರಥಮಪುರುಷ, ಬಹುವಚನ ಧಾತು ಕರೆ.

### ಅಭ್ಯಾಸ

ಈ ಕೆಳಗಿನ ವಾಕ್ಯಗಳ ಪದಸ್ಥಿತಿಯನ್ನು ವಿವರಿಸಿ :—

೧. ದೇವದತ್ತನು ಪಾಠವನ್ನು ಒಪ್ಪಿಸಿದನು. ೨. ಕಾಳಿದಾಸನು ನಾಟಕಗಳನ್ನು ಬರೆದನು. ೩. ಮೇಲಕ್ಕೆಸೆದರೆ ಕಲ್ಲು ಅಲ್ಲಿಯೇ ನಿಂತೀತೆ ? ೪. ರಾವಣನು ಸೀತೆಯನ್ನು ವಿಮಾನದಲ್ಲಿ ಕರೆದುಕೊಂಡು ಹೋದನು. ೫. ಅವಳನ್ನು ಲಂಕೆಯಲ್ಲಿ ಸೆರೆ ಇಟ್ಟನು. ೬. ರಾಮನು ಹದಿನಾಲ್ಕು ವರ್ಷ ಕಾಡಿನಲ್ಲಿ ಅಲೆದನು. ೭. ನೀಚರು ಸಜ್ಜನರನ್ನು ಜರೆಯುವರು. ೮. ಪಾಂಡವ ಕೌರವರು ಹದಿನೆಂಟು ದಿನ ಯುದ್ಧಮಾಡಿದರು. ೯. ಸತ್ಯವಂತನಾದ ರಾಮನು ದುಷ್ಟನಾದ ರಾವಣನನ್ನು ಕೊಂದನು. ೧೦. ದೇವರು ಒಳ್ಳೆಯವರಿಗೆ ಕೇಡು ಆಗದಂತೆ ಕಾಪಾಡುವನು.

# ಮೂರನೆಯ ಭಾಗ

## ಪಾಠ ೧

### ಅಕ್ಷರಗಳು Letters of alphabet

ನಮ್ಮ ಅಭಿಪ್ರಾಯಗಳನ್ನು ಇತರರಿಗೆ ತಿಳಿಸಲು ಎರಡು ದಾರಿಗಳುಂಟು: ೧. ಬಾಯಿಮಾತು. ೨. ಬರವಣಿಗೆ. ನಾವು ಇನ್ನೊಬ್ಬರೊಡನೆ ಮಾತನಾಡುವಾಗ ಅಥವಾ ಅವರಿಗೆ ಬರೆಯುವಾಗ ಅವರಿಗೆ ತಿಳಿದಿರುವ ಮಾತನ್ನೇ ಉಪಯೋಗಿಸಬೇಕು. ಹೀಗೆ ಜನರಲ್ಲಿ ಬಳಕೆಯಾಗಿರುವ ಮಾತಿಗೆ 'ಭಾಷೆ' ಎಂದು ಹೆಸರು. ನಾವು ಆಡುವ ಮಾತಿಗೆ 'ಕನ್ನಡ ಭಾಷೆ' ಎಂದು ಹೆಸರು.

ಭಾಷೆ ವಾಕ್ಯಗಳಿಂದಾಗಿದೆ. ವಾಕ್ಯಗಳು ಪದಗಳ ಸೇರಿಕೆಯಿಂದ ಆಗಿವೆ. ಪದಗಳು ಅಕ್ಷರಗಳ ಕೂಡಿಕೆಯಿಂದ ಉಂಟಾಗುತ್ತವೆ. ಅಕ್ಷರಗಳಿಗೆ 'ವರ್ಣಗಳು' ಎಂದೂ ಹೆಸರುಂಟು. ಒಂದೊಂದು ಅಕ್ಷರವೂ ಒಂದೊಂದು ಧ್ವನಿಯನ್ನು ಸೂಚಿಸುತ್ತದೆ.

ನಾವು ಆಡುವ ಕನ್ನಡ ಭಾಷೆಯಲ್ಲಿ ೫೦ ಅಕ್ಷರಗಳಿವೆ. ಅವನ್ನು ಇಲ್ಲಿ ಬರೆದಿದೆ.

| | | | | | | | | |
|---|---|---|---|---|---|---|---|---|
| ಅ | ಆ | ಇ | ಈ | ಉ | ಊ | ಋ | ೠ | |
| ಎ | ಏ | ಐ | ಒ | ಓ | ಔ | ಅಂ | ಅಃ | |
| | | ಕ | ಖ | ಗ | ಘ | ಙ | | |
| | | ಚ | ಛ | ಜ | ಝ | ಞ | | |
| | | ಟ | ಠ | ಡ | ಢ | ಣ | | |
| | | ತ | ಥ | ದ | ಧ | ನ | | |
| | | ಪ | ಫ | ಬ | ಭ | ಮ | | |
| ಯ | ರ | ಲ | ವ | ಶ | ಷ | ಸ | ಹ | ಳ |

ಈ ಅಕ್ಷರಗಳಲ್ಲಿ ಅ ಕಾರದಿಂದ ಔ ಕಾರದವರೆಗಿರುವ ೧೪ ಅಕ್ಷರಗಳಿಗೆ 'ಸ್ವರಗಳು' ಎಂದು ಹೆಸರು. ಉಳಿದ—ಎಂದರೆ ಕ ಕಾರದಿಂದ ಳ ಕಾರದವರೆಗಿರುವ ೩೪ ಅಕ್ಷರಗಳಿಗೆ 'ವ್ಯಂಜನಗಳು' ಎಂದು ಹೆಸರು consonants

ಸ್ವರಗಳು ತಾವಾಗಿಯೇ ಉಚ್ಚಾರಣೆಗೆ ಬರುವುವು. ವ್ಯಂಜನಗಳು ಸ್ವರಗಳೊಂದಿಗೆ ಸೇರಿ ಉಚ್ಚಾರಣೆಗೆ ಬರುವುವು.

ಸ್ವರಗಳ ಉಚ್ಚಾರಣೆಯಲ್ಲಿ ವ್ಯತ್ಯಾಸವಿದೆ. ಅ, ಇ, ಉ, ಋ, ಎ, ಒ— ಸ್ವರಗಳ ಉಚ್ಚಾರಣೆ ಮೊಟಕು. ಇವುಗಳಿಗೆ 'ಹ್ರಸ್ವ ಸ್ವರಗಳು' ಎಂದು ಹೆಸರು. ಉಳಿದ ಸ್ವರಗಳನ್ನು ಎಳೆದು—ದೀರ್ಘವಾಗಿ—ಉಚ್ಚರಿಸಬೇಕು. ಇವು 'ದೀರ್ಘ ಸ್ವರಗಳು'. 'ಂ' ಇದಕ್ಕೆ ಅನುಸ್ವಾರವೆಂದು ಹೆಸರು. ಇದು 'ಅ' ಎಂಬುದರೊಡನೆ ಸೇರಿದರೆ 'ಅಂ' ಎಂದು ಆಗುತ್ತದೆ. 'ಃ' ಇದಕ್ಕೆ ವಿಸರ್ಗವೆಂದು ಹೆಸರು. ಇದು 'ಅ' ಎಂಬುದರೊಡನೆ ಸೇರಿದರೆ 'ಅಃ' ಎಂದಾಗುತ್ತದೆ. ಈ ಅನುಸ್ವಾರ ವಿಸರ್ಗಗಳು ಸ್ವರಗಳೊಡನೆಯೂ ವ್ಯಂಜನಗಳೊಡನೆಯೂ ಸೇರುತ್ತವೆ.

ಕೆಲವು ವ್ಯಂಜನಗಳನ್ನು ವರ್ಗಗಳಾಗಿ ಎಂದರೆ ಗುಂಪುಗಳಾಗಿ ಸೇರಿಸಬಹುದು. ಇವು 'ವರ್ಗೀಯ' ವ್ಯಂಜನಗಳು. 'ಕ' ಇಂದ 'ಮ' ವರೆಗಿರುವ ವ್ಯಂಜನಗಳು ವರ್ಗೀಯ ವ್ಯಂಜನಗಳು:—

ಕವರ್ಗ : ಕ, ಖ, ಗ, ಘ, ಙ
ಚವರ್ಗ : ಚ, ಛ, ಜ, ಝ, ಞ
ಟವರ್ಗ : ಟ, ಠ, ಡ ಢ, ಣ
ತವರ್ಗ : ತ, ಥ, ದ, ಧ, ನ
ಪವರ್ಗ : ಪ, ಫ, ಬ, ಭ, ಮ

ಮಿಕ್ಕವು ಅವರ್ಗೀಯ ವ್ಯಂಜನಗಳು :—ಯ, ರ, ಲ, ವ, ಶ, ಷ, ಸ, ಹ, ಳ.

## ಅಭ್ಯಾಸ

(೧) ಭಾಷೆ—ಎಂದರೇನು? ಅಕ್ಷರವೆಂದರೇನು?

(೨) ಕನ್ನಡದಲ್ಲಿ ಸ್ವರಗಳೆಷ್ಟು? ವ್ಯಂಜನಗಳೆಷ್ಟು? ಸ್ವರ ಮತ್ತು ವ್ಯಂಜನಗಳಿಗಿರುವ ಭೇದವೇನು?

(೩) ಸ್ವರದಲ್ಲೆಷ್ಟು ಬಗೆ? ವ್ಯಂಜನದಲ್ಲೆಷ್ಟು ಬಗೆ?

(೪) ಇಲ್ಲಿ ಸ್ವರ ವ್ಯಂಜನಗಳನ್ನು ಬಿಡಿಸಿ :—

೧. ನಾವು ಆಡುವ ಮಾತು ನಮ್ಮ ಅಂತಃಕರಣವನ್ನು ಹೇಳುತ್ತದೆ.
೨. ದೇವರು ಎಲ್ಲರನ್ನೂ ರಕ್ಷಿಸುವುದರಿಂದ ನಾವು ಅವನನ್ನು ಮನಃಪೂರ್ವಕವಾಗಿ ಭಜಿಸಬೇಕು.
೩. ಸತ್ತವರಿಗಾಗಿ ದುಃಖಿಸಿದರೆ ಅವರು ಹಿಂದಿರುಗುವರೆ?
೪. ಪ್ರಾಯಶಃ ನಾಳೆ ಮಳೆ ಬರಬಹುದು.
೫. ಮುಂದಕ್ಕೆ ಅವನು ಬಹುಶಃ ಓದಲಾರನು.

---

## ಪಾಠ ೨

### ಸಂಧಿ

೧. ಮಾವಿನೆಲೆಯಿಂದ ಹಲ್ಲುಜ್ಜುತ್ತಾರೆ.

೨. ಉದ್ದವಾಗಿರುವ ಮರದ ತುಂಡನ್ನು ತೊಲೆಗೆ ಉಪಯೋಗಿಸು.

೩. ನಿನ್ನ ತುಟಿಯ ಬಣ್ಣ ಅಚ್ಚಗೆಂಪು.

೪. ತಾನುಂಟೋ ಮೂರು ಲೋಕವುಂಟೋ!

ಮೇಲಿನ ವಾಕ್ಯಗಳನ್ನು ಪರೀಕ್ಷಿಸಿ ನೋಡಿ. ಕೆಲವು ಕಡೆ ಬಿಡಿಪದಗಳಿವೆ. ಕೆಲವು ಕಡೆ ಎರಡು ಮೂರು ಪದಗಳು ಒಂದಾಗಿ ಬೆರೆತಿವೆ. ನಾವು ಮಾತನಾಡುವಾಗ ಯಾವಾಗಲೂ ಬಿಡಿ ಪದಗಳನ್ನೇ ಉಪಯೋಗಿಸುವುದಿಲ್ಲ. 'ಮಾವಿನೆಲೆ' ಎಂಬುದನ್ನು ಮಾವಿನ+ಎಲೆ ಎಂದೂ, 'ಹಲ್ಲುಜ್ಜು' ಎಂಬುದನ್ನು ಹಲ್ಲು+ಉಜ್ಜು ಎಂದೂ, 'ಉದ್ದವಾಗಿರುವ' ಎಂಬುದನ್ನು ಉದ್ದವಾಗಿ+ಇರುವ ಎಂದೂ, 'ಅಚ್ಚಗೆಂಪು' ಎಂಬುದನ್ನು ಅಚ್ಚ+ಕೆಂಪು ಎಂದೂ ಬಿಡಿಸಿ ಹೇಳಬಹುದು. ಪದಗಳನ್ನು ಸೇರಿಸುವಾಗ ಅಕ್ಷರಗಳು ಒಟ್ಟುಗೂಡುವುವು. ಹೀಗೆ ಅಕ್ಷರಗಳು ಒಂದಕ್ಕೊಂದು ಸೇರುವುದಕ್ಕೆ 'ಸಂಧಿ' ಎಂದು ಹೆಸರು.

ಸಂಧಿಯಾಗುವಾಗ ಬದಲಾವಣೆಗಳಾಗುವುದುಂಟು :—

(i) ಚಿಕ್ಕಮ್ಮ ಊರಿಂದೂರಿಗೆ ಹೋದಳು.

ಇಲ್ಲಿ 'ಚಿಕ್ಕಮ್ಮ' ಎಂಬ ಪದವನ್ನು ಬಿಡಿಸಿ ಹೇಳಿದರೆ ಚಿಕ್ಕ+ಅಮ್ಮ ಎಂದೂ 'ಊರಿಂದೂರಿಗೆ' ಎಂಬ ಪದವನ್ನು ಬಿಡಿಸಿದರೆ

ಊರಿಂದ + ಊರಿಗೆ ಎಂದೂ ಆಗುತ್ತದೆ. ಚಿಕ್ಕಮ್ಮ ಎಂಬ ಪದದಲ್ಲಿ 'ಚಿಕ್ಕ' ಎಂಬ ಪದ 'ಅಮ್ಮ' ಎಂಬ ಪದದೊಡನೆ ಬೆರೆಯುವಾಗ 'ಕ್ಕ' ಎಂಬುದರಲ್ಲಿರುವ 'ಅ' ಕಾರವು ಹೋಗುತ್ತದೆ. 'ಊರಿಂದ' ಎಂಬ ಪದವು 'ಊರಿಗೆ' ಎಂಬುದರೊಡನೆ ಸೇರುವಾಗ 'ದ' ಎಂಬುದರಲ್ಲಿರುವ 'ಅ' ಕಾರ ಹೋಗುತ್ತದೆ.

ಸಂಧಿಯಾಗುವಾಗ ಒಂದಕ್ಷರ ಹೋದರೆ 'ಲೋಪಸಂಧಿ' ಎಂದು ಹೆಸರು. (ಲೋಪವೆಂದರೆ ಕಾಣದೆ ಹೋಗುವುದು ಎಂದರ್ಥ).

(ii) ಕೈಯಿಂದ ಮಗುವನ್ನು ಎತ್ತಿಕೋ.

ಈ ವಾಕ್ಯದಲ್ಲಿರುವ 'ಕೈಯಿಂದ' 'ಮಗುವನ್ನು' ಎಂಬ ಪದಗಳನ್ನು ಬಿಡಿಸಿದರೆ ಕೈ + ಇಂದ, ಮಗು +ಅನ್ನು ಎಂದಾಗುತ್ತದೆ. ಸಂಧಿಯಾಗುವಾಗ ಕ್ರಮವಾಗಿ 'ಯ್' ಮತ್ತು 'ವ್' ಕಾರಗಳು ಹೊಸದಾಗಿ ಬಂದಿರುತ್ತವೆ.

ಸಂಧಿಮಾಡುವಾಗ ಒಂದಕ್ಷರ ಹೊಸದಾಗಿ ಬಂದರೆ 'ಆಗಮ ಸಂಧಿ' ಎಂದು ಹೆಸರು. (ಆಗಮ ಎಂದರೆ ಹೊಸದಾಗಿ ಬರುವುದು ಎಂದರ್ಥ.)

(iii) ಮಳೆಗಾಲದಲ್ಲಿ ಮರಗಳು ಚಿಗುರುವುವು.

'ಮಳೆಗಾಲ' ಎಂಬ ಪದವನ್ನು ಬಿಡಿಸಿದರೆ ಮಳೆ+ಕಾಲ ಎಂದಾಗುತ್ತದೆ. ಇಲ್ಲಿ ಸಂಧಿಯಾಗುವಾಗ 'ಕಕಾರ' ಹೋಗಿ 'ಗಕಾರ' ಬಂದಿದೆ.

ಸಂಧಿಯಾಗುವಾಗ ಒಂದಕ್ಷರಕ್ಕೆ ಪ್ರತಿಯಾಗಿ ಇನ್ನೊಂದಕ್ಷರವು ಬಂದರೆ 'ಆದೇಶಸಂಧಿ' ಎಂದು ಹೆಸರು.

(iv) ಇದೋ ಅದೋ ನೀನೇ ಹೇಳು.

ಇಲ್ಲಿ 'ಇದೋ ಅದೋ' ಎಂಬ ಕಡೆ ಅಕ್ಷರಗಳು ಸೇರಿ ಸಂಧಿಕಾರ್ಯವಾಗುವುದಿಲ್ಲ.

ಅಕ್ಷರಗಳು ಸೇರಿದಾಗ ಸಂಧಿಕಾರ್ಯವಾಗದಿದ್ದರೆ 'ಪ್ರಕೃತಿಭಾವ' ಎಂದು ಹೆಸರು.

## ಅಭ್ಯಾಸ

(೧) ಸಂಧಿ—ಎಂದರೇನು ?

(೨) ಲೋಪ, ಆಗಮ, ಆದೇಶಗಳಿರುವ ವ್ಯತ್ಯಾಸಗಳನ್ನು ತಿಳಿಸಿ.

(೩) ಪ್ರಕೃತಿಭಾವ – ಎಂದರೇನು ?

(೪) ಈ ಪದಗಳನ್ನು ಪರೀಕ್ಷಿಸಿ ಸಂಧಿಯಾಗಿದೆಯೋ ಇಲ್ಲವೋ ಎಂಬುದನ್ನು ತಿಳಿಸಿ :—

| | | |
|---|---|---|
| ಕಸುಗಾಯಿ | ಪುಂಡಾಟ | ಆಹಾ ಎಂದು |
| ಹುಲಿದೊಗಲು | ಕೈಯಿಂದ | ಎಲ ಎಲಾ |
| ಆ ಆನೆ | ಮರಗೆಲಸ | ಮಾಂಗಾಯಿ |
| ಮಾರುತ್ತರ | ಹೂಬುಟ್ಟಿ | ಕೈಗೆಲಸ |

---

## ಪಾಠ ೩

### ಸಮಾಸಗಳು

ಹಣ್ಣನ್ನು+ಮಾರುವವನು= ಹಣ್ಣುಮಾರುವವನು.

ಹರಟೆಯಲ್ಲಿ+ಮಲ್ಲ= ಹರಟೆಮಲ್ಲ.

ಅರಸನ+ಮನೆ= ಅರಮನೆ.

ಮೇಲೆ ಬರೆದಿರುವುದನ್ನು ನೋಡಿ ಹರಟೆಯಲ್ಲಿ +ಮಲ್ಲ' ಎಂಬ ಎರಡು ಪದಗಳು ಸೇರಿ 'ಹರಟೆಮಲ್ಲ' ಎಂಬ ಒಂದೇ ಪದವಾಗಿದೆ. ಹೀಗೆಯೇ 'ಹಣ್ಣುಮಾರುವವನು' 'ಅರಮನೆ' ಎಂಬ ಪದಗಳಾಗಿರುವುವು.

ಹರಟೆಮಲ್ಲ ಎಂಬ ಪದದಿಂದ ಹರಟೆ, ಮಲ್ಲ ಎಂಬ ಬಿಡಿ ಪದಗಳ ಅರ್ಥವು ತೋರುವುದಿಲ್ಲ. ಇವೆರಡು ಪದಗಳ ಅರ್ಥವನ್ನೂ ಒಳಗೊಂಡ ಬೇರೊಂದು ಪದವಾಗಿದೆ; ಇದರಿಂದ ಬೇರೊಂದು ಅರ್ಥವು ಹೊರಡುತ್ತದೆ.

ಎರಡು ಅಥವಾ ಅನೇಕ ಪದಗಳು ಒಂದೇ ಅರ್ಥವಿರುವಂತೆ ಸೇರಿ ಒಂದು ಪದವಾದಾಗ ಸಮಾಸವಾಗುವುದು. ಹೀಗೆ ಸಮಾಸವಾಗಿ ಒಟ್ಟುಗೂಡಿದ ಪದಗಳನ್ನು ಬಿಡಿಸಿ ಬೇರೆಬೇರೆಯಾಗಿ ಬರೆದರೆ ಅದಕ್ಕೆ 'ವಿಗ್ರಹವಾಕ್ಯ' ಎಂದು ಹೆಸರು.

ಸಮಾಸಗಳು ಆರು ಬಗೆಯಾಗಿರುವುವು :—ತತ್ಪುರುಷ, ಕರ್ಮಧಾರಯ, ಬಹುವ್ರೀಹಿ, ದ್ವಂದ್ವ, ಅಂಶಿ, ಕ್ರಿಯಾ.

ಹಣವನ್ನು + ಕೊಟ್ಟವನು = ಹಣಕೊಟ್ಟವನು.

ಬಾಳೆಯ + ಹಣ್ಣು = ಬಾಳೆಹಣ್ಣು.

ಕಾಡಿನಲ್ಲಿರುವ + ಮರ = ಕಾಡುಮರ.

ಇಲ್ಲಿ ಬರೆದಿರುವ ಸಮಾಸಗಳಲ್ಲಿ 'ಕೊಟ್ಟವನು', 'ಹಣ್ಣು', 'ಮರ' ಎಂಬ ಉತ್ತರಪದಗಳ ಅರ್ಥವು ಮುಖ್ಯವಾಗಿದೆ. ಇಂತಹ ಸಮಾಸಕ್ಕೆ 'ತತ್ಪುರುಷ ಸಮಾಸ' ಎಂದು ಹೆಸರು.

ಸುಳ್ಳಾದ + ಮಾತು = ಸುಳ್ಳುಮಾತು.

ಮೂರಾದ + ಕಣ್ಣು = ಮೂರು ಕಣ್ಣು.

ಯಾವುದು + ಮನೆ = ಯಾವ ಮನೆ.

ಆಳುವವನು + ರಾಯ = ಆಳುವ ರಾಯ.

ಈ ಸಮಾಸಗಳಲ್ಲಿ ಪೂರ್ವಪದವು ಉತ್ತರಪದದ ವಿಶೇಷಣವಾಗಿದೆ. ವಿಶೇಷಣವು ವಿಶೇಷ್ಯದೊಡನೆ ಸಮಾಸವಾಗಿದೆ. ಇದಕ್ಕೆ 'ಕರ್ಮಧಾರಯ ಸಮಾಸ' ಎಂದು ಹೆಸರು. ಮೂರಾದ + ಕಣ್ಣು ಎಂಬಲ್ಲಿ ಪೂರ್ವಪದ ಸಂಖ್ಯಾವಾಚಕವಾಗಿದೆ. 'ಯಾವುದು + ಮನೆ', 'ಆಳುವವನು + ರಾಯ' ಎಂಬಲ್ಲಿ ಪೂರ್ವಪದವು ಸರ್ವನಾಮ ಅಥವಾ ಕೃದಂತವಾಗಿದೆ.

ಕಾಲಿನ + ಅಡಿ = ಅಂಗಾಲು.

ಕೈಯ್ಯ + ಮುಂದು = ಮುಂಗೈ.

ಕಾಲಿನ + ಮುಂದು = ಮುಂಗಾಲು.

ಈ ಸಮಾಸದಲ್ಲಿ ಪೂರ್ವಪದದ ಅರ್ಥವೇ ಮುಖ್ಯವಾಗಿದೆ. ಇದಕ್ಕೆ 'ಅಂಶಿ ಸಮಾಸ' ಎಂದು ಹೆಸರು.

ಓರೆಯಾದ + ಕಣ್ಣು (ಯಾರಿಗೆ ಇದೆಯೋ ಅವನು) ಓರೆಗಣ್ಣ.

ಸೊಟ್ಟಾದ + ಕಣ್ಣು (ಯಾರಿಗೆ ಇದೆಯೋ ಅವನು) ಸೊಟ್ಟುಗಣ್ಣ.

ಮೇಲಿನ ಸಮಾಸದಲ್ಲಿ ಒಟ್ಟುಗೂಡುವ ಪದಗಳ ಅರ್ಥ ಮುಖ್ಯವಲ್ಲ. 'ಓರೆಗಣ್ಣ' ಮುಂತಾದ ಪದಗಳ ಬೇರೆ ಅರ್ಥ ಮುಖ್ಯವಾಗಿದೆ. ಇಂತಹ ಸಮಾಸಕ್ಕೆ 'ಬಹುವ್ರೀಹಿ ಸಮಾಸ' ಎಂದು ಹೆಸರು.

ಗಿಡ + ಮರ + ಬಳ್ಳಿ = ಗಿಡಮರಬಳ್ಳಿಗಳು.

ಹಣ್ಣು + ಕಾಯಿ = ಹಣ್ಣುಕಾಯಿ.

ಹತ್ತು + ಆರು (ಇವುಗಳ ಒಟ್ಟು) = ಹದಿನಾರು.

ಈ ಸಮಾಸದಲ್ಲಿ ಬರುವ ಎಲ್ಲಾ ಪದಗಳ ಅರ್ಥವು ಮುಖ್ಯವಾಗಿದೆ. ಇದಕ್ಕೆ 'ದ್ವಂದ್ವ ಸಮಾಸ' ಎಂದು ಹೆಸರು.

ಹಣ್ಣನ್ನು + ತಿಂದನು = ಹಣ್ಣು ತಿಂದನು.
ದನವನ್ನು + ಕಾಯುವವನು = ದನಕಾಯುವವನು.

ಇಲ್ಲಿ 'ತಿಂದನು' 'ಕಾಯುವವನು' ಎಂಬ ಉತ್ತರ ಪದಗಳು ಕ್ರಿಯೆಯನ್ನು ಸೂಚಿಸುತ್ತವೆ. ಇಂತಹ ಸಮಾಸಕ್ಕೆ 'ಕ್ರಿಯಾ ಸಮಾಸ' ಎಂದು ಹೆಸರು.

## ಅಭ್ಯಾಸ

(೧) ಸಮಾಸ — ಎಂದರೇನು ?

(೨) ತತ್ಪುರುಷ ಸಮಾಸ, ಅಂಶಿ ಸಮಾಸ — ಇವುಗಳಿಗಿರುವ ವ್ಯತ್ಯಾಸವನ್ನು ಹೇಳಿ.

(೩) ಬಿಳಿಯ ಬಟ್ಟೆ, ಮಳೆಗಾಲ, ಕಣ್ಣೀರು, ನೂರು ರೂಪಾಯಿ, ಮಳೆಬೆಳೆಗಳು, ಒಳಗೆರೆ, ಡೊಂಕುಗಾಲ, ಊಟಮಾಡು, ಮಾಡಿದ ಕೆಲಸ — ಇವಕ್ಕೆ ವಿಗ್ರಹವಾಕ್ಯಗಳನ್ನು ಬರೆಯಿರಿ.

---

## ಪಾಠ ೪

### ದ್ವಿರುಕ್ತಿ

ನಾನು ಅವನ ಆಟವನ್ನು ನೋಡಿ ನೋಡಿ ನಕ್ಕೆನು.
ಅವನು ಊರೂರಿನಲ್ಲಿ ಅಲೆಯುತ್ತಿರುತ್ತಾನೆ.
ಹೊತ್ತಾಯಿತು ಬೇಗ ಬೇಗ ನಡೆ.
ಎಲಾ ಎಲಾ ನಿನಗೆ ಬುದ್ಧಿ ಇರಲಿಲ್ಲವೆ ?
ನಮಸ್ಕಾರ ನಮಸ್ಕಾರ, ಬೇಗ ಒನ್ನಿ.
ಕಾಸುಕಾಸಿಗೂ ಹೊಟ್ಟೆ ಉರಿಸಿಕೊಳ್ಳುವವರನ್ನು ನಂಬಬಾರದು.

ಈ ವಾಕ್ಯಗಳಲ್ಲಿ ಕೆಲವು ಪದಗಳನ್ನು ಎರಡು ಬಾರಿ ಹೇಳಿದೆ. ನೋಡಿ ನೋಡಿ ಎಂಬಲ್ಲಿ ಆವೃತ್ತಿಯೂ, ಬೇಗಬೇಗ ಎಂಬಲ್ಲಿ ಅತಿಶಯವೂ, ನಮಸ್ಕಾರ ನಮಸ್ಕಾರ ಎಂಬಲ್ಲಿ ಆಧಿಕ್ಯವೂ, ಎಲಾ ಎಲಾ ಎಂಬಲ್ಲಿ ಕೋಪವೂ, ಕಾಸುಕಾಸಿಗೂ ಎಂಬಲ್ಲಿ ವಸ್ತುನಿರ್ಣಯವೂ ಕಂಡುಬರುತ್ತವೆ.

ವಿಶೇಷವಾದ ಅರ್ಥವುಂಟಾಗುವಂತೆ ಪದಗಳನ್ನು ಎರಡು ಸಾರಿ ಹೇಳುವುದಕ್ಕೆ ' ದ್ವಿರುಕ್ತಿ ' ಎಂದು ಹೆಸರು.

ಕಡೆ ಕಡೆ = ಕಟ್ಟಕಡೆ. ತುದಿ ತುದಿ = ತುತ್ತತುದಿ.
ನಡು ನಡು = ನಟ್ಟನಡು.
ಬಯಲು ಬಯಲು = ಬಟ್ಟಬಯಲು
ಮೊದಲು ಮೊದಲು = ಮೊತ್ತಮೊದಲು.

ಮೇಲೆಕಂಡಂತೆ ಕಡೆ, ನಡು, ಬಯಲು, ಎಂಬುದನ್ನು ಎರಡು ಸಾರಿ ಪ್ರಯೋಗಿಸಿದಾಗ ಅವುಗಳಿಗೆ ಕ್ರಮವಾಗಿ ಕಟ್ಟ, ನಟ್ಟ, ಬಟ್ಟ ಎಂಬುವೂ ತುದಿ, ಮೊದಲು ಎಂಬುವುಗಳಿಗೆ ತುತ್ತ, ಮೊತ್ತ ಎಂಬುವೂ ಆದೇಶವಾಗಿ ಬರುವುವು.

## ಅಭ್ಯಾಸ

(೧) ದ್ವಿರುಕ್ತಿ — ಎಂದರೇನು ? ಅದು ಏಕೆ ಬರುತ್ತದೆ ?

(೨) ಈ ಕೆಳಗಿನ ವಾಕ್ಯಗಳಲ್ಲಿ ಕೆಲವು ಪದಗಳು ಎರಡು ಬಾರಿ ಬಂದಿವೆ. ಇವು ಯಾವ ಅರ್ಥದಲ್ಲಿ ಬಂದಿವೆ ?

೧. ನೋಡಿ ನೋಡಿ ರಾತ್ರಿ ಕಂಡ ಬಾವಿಗೆ ಹಗಲು ಬಿದ್ದಿರುವವನು ಬುದ್ಧಿವಂತನೇ? ೨. ಬ್ರಾಹ್ಮಣನು ಹುಲಿಯನ್ನು ನೋಡಿ ಬೇಗ ಬೇಗ ಓಡಿದನು. ೩. ಊರೂರಿಗೂ ಅಲೆಯಲು ನಾನು ದಾಸಯ್ಯನಲ್ಲ. ೪. ಮಗನೆ, ಮಗನೆ, ನನ್ನನ್ನು ಬಿಟ್ಟೆಯಾ ? ೫. ಕೊನೆಕೊನೆಗೆ ಅವನ ಯೋಗ್ಯತೆ ತಿಳಿಯಿತು. ೬. ನನ್ನಿಂದ ಎಲ್ಲರಿಗೂ ಒಂದೊಂದು ರೂಪಾಯಿ ಲಾಭ ಬಂತು. ೭. ಸಂಜೆಯಾದರೆ ಮನೆ ಮನೆಗೂ ದೀಪ ಹತ್ತಿಸಬೇಕು. ೮. ಛಿ! ಛಿ! ನಿನಗೆ ಬುದ್ಧಿಯಿಲ್ಲ. ೯. ಅಯ್ಯಯ್ಯೋ! ಭೂಮಿ ನಡುಗಿದರೇನು ಗತಿ!

---

## ಪಾಠ ೫೫

## ವಾಕ್ಯಭೇದ

ಬಳ್ಳೆಯವರು ಜಗತ್ತಿಗೆ ಉಪಕಾರವನ್ನು ಮಾಡುತ್ತಾರೆ.
ಕೃಷ್ಣನು ಕಂಸನನ್ನು ಕೊಂದನು.
ಮಗು ಊರಿಗೆ ಹೋಯಿತು.

ಮೇಲಿನ ವಾಕ್ಯಗಳನ್ನು ನೋಡಿ. ಅವುಗಳಲ್ಲಿ ಮಾಡುತ್ತಾರೆ, ಕೊಂದನು, ಹೋಯಿತು — ಎಂಬ ಕ್ರಿಯಾಪದಗಳಿವೆ. ಅವುಗಳಲ್ಲಿ

ಒಂದೊಂದರಲ್ಲಿಯೂ ಒಂದೊಂದೇ ಕ್ರಿಯಾಪದವಿದೆ. ಒಂದೇ ಕ್ರಿಯಾಪದವಿದ್ದರೂ ವಾಕ್ಯದ ಅರ್ಥವು ಸಂಪೂರ್ಣವಾಗಿದೆ. ಈ ವಾಕ್ಯದ ಅರ್ಥವನ್ನು ತಿಳಿಯಲು ಇನ್ಯಾವ ವಾಕ್ಯದ ಅಥವಾ ಪದದ ಸಹಾಯವೂ ಬೇಕಾಗಿಲ್ಲ.

ಹೀಗೆ ಒಂದೇ ಕ್ರಿಯಾಪದವನ್ನು ಹೊಂದಿ ಸ್ವತಂತ್ರವಾದ ಅರ್ಥವನ್ನು ಕೊಡುವ ವಾಕ್ಯಕ್ಕೆ 'ಸಾಮಾನ್ಯವಾಕ್ಯ' ಎಂದು ಹೆಸರು.

ಈ ವಾಕ್ಯವನ್ನು ನೋಡಿ.—

'ದೇವರೇ ದೊಡ್ಡವನು' ಎಂದು ಒಬ್ಬ ಕವಿ ಹೇಳಿದ್ದಾನೆ.

ನಮ್ಮ ಮಹಾರಾಜರು ಒಳ್ಳೆಯವರೆಂಬುದನ್ನು ಎಲ್ಲರೂ ಬಲ್ಲರು.

ನಾಳೆ ಮಳೆ ಬರುತ್ತದೆಂದು ಜೋಯಿಸರು ಹೇಳಿದ್ದರು.

ಇವುಗಳಲ್ಲಿ ಎರಡು ಕೆಲಸಗಳನ್ನು ಸೂಚಿಸುವುದರಿಂದ ಎರಡು ಕ್ರಿಯಾಪದಗಳಿವೆ. 'ದೇವರೇ ದೊಡ್ಡವನು' ಎಂದು 'ಒಬ್ಬ ಕವಿ ಹೇಳಿದ್ದಾನೆ'—ಎನ್ನುವ ವಾಕ್ಯವನ್ನು ಪರೀಕ್ಷಿಸೋಣ. ಈ ವಾಕ್ಯದಲ್ಲೇ ಎರಡು ವಾಕ್ಯಗಳಿವೆ: ಒಂದು 'ದೇವರೇ ದೊಡ್ಡವನು' ಎನ್ನುವುದು; ಇನ್ನೊಂದು 'ಒಬ್ಬ ಕವಿ ಹೇಳಿದ್ದಾನೆ' ಎನ್ನುವುದು. 'ದೇವರೇ ದೊಡ್ಡವನು' ಎಂಬ ವಾಕ್ಯವು 'ಒಬ್ಬ ಕವಿಯು ಹೇಳಿದ್ದಾನೆ' ಎನ್ನುವುದಕ್ಕೆ ಅಧೀನವಾಗಿದೆ. ಮೊದಲನೆಯದು ಅಧೀನವಾಕ್ಯ. ಎರಡನೆಯದು ಪ್ರಧಾನವಾಕ್ಯ. ಆದರೂ ಈ ಎರಡೂ ವಾಕ್ಯಗಳು ಸೇರಿ ಒಂದು ಸ್ವತಂತ್ರವಾದ ಅರ್ಥವನ್ನು ಕೊಡುವ ವಾಕ್ಯವಾಗಿವೆ.

ಬೇರೊಂದು ವಾಕ್ಯವನ್ನೇ ಅಂಗವಾಗಿ ಹೊಂದಿರುವ ವಾಕ್ಯಕ್ಕೆ 'ಮಿಶ್ರವಾಕ್ಯ' ಎಂದು ಹೆಸರು.

ಈ ವಾಕ್ಯಗಳನ್ನು ನೋಡಿ.—

ಅನೇಕರು ಧರ್ಮವನ್ನು ಹೇಳುತ್ತಾರೆ; ಆದರೆ ಅದರಂತೆ ಮಾಡುವವರು ಕಡಮೆ.

ಬಾಯಿಪಾಠ ಮಾಡಿದ್ದೀಯೇ; ಆದರೂ ಅದರಿಂದ ನಿನಗೆ ಪ್ರಯೋಜನವಿಲ್ಲ.

ನೀನು ಓಡುತ್ತೀಯೆ; ಆದುದರಿಂದ ನಿನಗೆ ಆಯಾಸವಾಗುತ್ತದೆ.

ಮೇಲಿನ ಒಂದೊಂದು ವಾಕ್ಯದಲ್ಲಿಯೂ ಎರಡೆರಡು ಸ್ವತಂತ್ರವಾದ ಅರ್ಥವನ್ನು ಕೊಡುವ ಸಾಮಾನ್ಯ ವಾಕ್ಯಗಳಿವೆ. ಅವುಗಳನ್ನು 'ಆದರೆ' 'ಆದುದರಿಂದ' ಮುಂತಾದ ಅವ್ಯಯಗಳಿಂದ ಸೇರಿಸಿದೆ.

ಎರಡು ಅಥವಾ ಹೆಚ್ಚು ಸ್ವತಂತ್ರ ವಾಕ್ಯಗಳನ್ನು ಅವ್ಯಯಗಳಿಂದ ಸೇರಿಸಿ ಒಂದು ವಾಕ್ಯವನ್ನಾಗಿ ಮಾಡಿದರೆ ಆ ವಾಕ್ಯಕ್ಕೆ 'ಸಂಯೋಜಿತವಾಕ್ಯ' ಎಂದು ಹೆಸರು.

## ಅಭ್ಯಾಸ

(೧) ವಾಕ್ಯಗಳೆಷ್ಟು ಬಗೆ ?

(೨) ಇವು ಯಾವ ಬಗೆಯ ವಾಕ್ಯಗಳು:—

೧. ಹತ್ತಿರದಲ್ಲಿ ಮಸೀದಿ ಇರಲಿಲ್ಲ; ಆದುದರಿಂದ ಅವರು ನಿಂತಲ್ಲಿಯೇ ದೇವರನ್ನು ಪ್ರಾರ್ಥಿಸಿದರು. ೨. ದೇವರೊಬ್ಬನಿರುವನೆಂಬುದು ಎಲ್ಲರಿಗೂ ತಿಳಿದ ವಿಚಾರ. ೩. ಪೈರು ಹಣ್ಣಾಗುವವರೆಗೂ ಗಿಡವು ಭೂಮಿಯಿಂದ ಆಹಾರವನ್ನು ಬಯಸುವುದು. ೪. ಸಜ್ಜನರಿಂದ ಎಲ್ಲರಿಗೂ ಉಪಕಾರವಾಗುತ್ತದೆ; ಆದರೆ ದುರ್ಜನರಿಂದ ಕೆಡಕಾಗುತ್ತದೆ. ೫. ಯಾರನ್ನು ಮುಂದೆ ದೊರೆಗಳಾಗಿ ಮಾಡುವುದೆಂಬ ಪ್ರಶ್ನೆ ಬಂತು. ೬. ವಿದ್ಯೆಯಿಂದ ನಿಮಗೆ ಬೇಸರವುಂಟಾಗದೆ ಇರುವುದಕ್ಕೋಸ್ಕರ ನೀವು ಓದುವ ಪಾಠದಲ್ಲಿ ಏನಿವೆ ಎಂದು ವಿಚಾರಮಾಡಿ ತಿಳಿದುಕೊಳ್ಳಿರಿ.

---

## ಪಾಠ ೬

## ವಾಕ್ಯವಿಭಜನೆ

Analysis of sentences

ನಾವು ಇತರರು ಬರೆದ ವಾಕ್ಯವನ್ನು ಓದಿ ಅದನ್ನು ಸ್ಪಷ್ಟವಾಗಿ ತಿಳಿಯಬೇಕಾದರೆ, ಅದರಲ್ಲಿರುವ ಭಾಗಗಳನ್ನೂ, ಅವುಗಳ ಜೋಡಣೆಯನ್ನೂ ತಿಳಿಯಬೇಕು. ಹೀಗೆ ಒಂದು ವಾಕ್ಯವನ್ನು ವಿಂಗಡಿಸಿ ಅದರಲ್ಲಿರುವ ಪದಗಳ ರೂಪವನ್ನು ವಿವರಿಸುವುದಕ್ಕೆ 'ವಾಕ್ಯವಿಭಜನೆ' ಎಂದು ಹೆಸರು.

ಬೇಸಿಗೆಯ ಬಿಸಿಲು ಹಿಮಗಾಲದ ಮಂಜನ್ನು ಹರಿಸಿತು.

ಮೇಲೆ ಬರೆದಿರುವುದು ಒಂದು ಸಾಮಾನ್ಯ ವಾಕ್ಯ. ಅದನ್ನು

ವಿಂಗಡಿಸುವಾಗ ಮೊದಲು ಕರ್ತೃಪದ, ಕ್ರಿಯಾಪದ, ಕರ್ಮಪದಗಳನ್ನು ಕಂಡುಹಿಡಿಯಬೇಕು. ಈ ವಾಕ್ಯದಲ್ಲಿ ‘ ಬಿಸಿಲು ’ ಎಂಬುದು ಕರ್ತೃಪದ ; ‘ ಹರಿಸಿತು ’ ಕ್ರಿಯಾಪದ ; ‘ ಮಂಜನ್ನು ’ ಕರ್ಮಪದ. ಅನಂತರ ಕರ್ತೃವಿಶೇಷಣ, ಕರ್ಮವಿಶೇಷಣ, ಕ್ರಿಯಾವಿಶೇಷಣಗಳಿದ್ದರೆ ಕಂಡುಹಿಡಿಯಿರಿ. ಇಲ್ಲಿ ‘ ಬೇಸಗೆಯ ’ ಎಂಬುದು ಕರ್ತೃವಿಶೇಷಣ ; ಹಿಮಗಾಲದ ’ ಎಂಬುದು ಕರ್ಮವಿಶೇಷಣ; ಈ ವಾಕ್ಯದಲ್ಲಿ ಕ್ರಿಯಾವಿಶೇಷಣವೇ ಇಲ್ಲ, ಇದು ಸಾಮಾನ್ಯ ವಾಕ್ಯವನ್ನು ವಿಭಜಿಸುವ ಕ್ರಮವಾಯಿತು. (ನಾಮವಿಶೇಷಣವಿದ್ದರೆ ಅದನ್ನೂ ಬರೆಯಿರಿ.)

ಮಳೆ ಬರಲಿಲ್ಲ ; ಆದರೂ ಬೆಳೆ ಚೆನ್ನಾಗಿದೆ.

ಇದೊಂದು ಸಂಯೋಜಿತವಾಕ್ಯ. ಇದನ್ನು ವಿಭಜಿಸುವಾಗ ‘ ಆದರೂ ’ ಎಂಬ ಸಂಬಂಧವನ್ನು ಸೂಚಿಸುವ ಅವ್ಯಯವನ್ನು ಬೇರೆ ತೆಗೆದಿಡಿ. ಆಮೇಲೆ ಎರಡು ಸಾಮಾನ್ಯ ವಾಕ್ಯಗಳು ಉಳಿಯುವುವು. ಅವನ್ನು ಸುಲಭವಾಗಿ ವಿಂಗಡಿಸಬಹುದು.

‘ ಜಗತ್ತು ಒಂದು ನಾಟಕಶಾಲೆ ’ ಎಂದು ಒಬ್ಬ ಕವಿ ಹೇಳಿದ್ದಾನೆ.

ಇದು ಮಿಶ್ರವಾಕ್ಯ. ಮೊದಲು ಪ್ರಧಾನ ವಾಕ್ಯವನ್ನು ವಿಭಜನೆ ಮಾಡಿ. ಇಲ್ಲಿ ‘ ಒಬ್ಬ ಕವಿ ಹೇಳಿದ್ದಾನೆ ’ ಎಂಬುದು ಪ್ರಧಾನವಾಕ್ಯ. ಇದರಲ್ಲಿ ‘ ಹೇಳಿದ್ದಾನೆ ’ ಎಂಬುದು ಕ್ರಿಯಾಪದ ; ‘ ಕವಿ ’ ಎಂಬುದು ಕರ್ತೃಪದ ; ‘ ಒಬ್ಬ ’ ಎಂಬುದು ಕರ್ತೃವಿಶೇಷಣ. ಅನಂತರ ಅಧೀನ ವಾಕ್ಯವನ್ನು ತೆಗೆದುಕೊಳ್ಳಿ ಅದನ್ನು ವಿಭಜಿಸಿ. ಯಾವ ಪದದಿಂದ ಅದು ಮುಖ್ಯ ವಾಕ್ಯಕ್ಕೆ ಅಧೀನವಾಗಿದೆಯೆಂಬುದನ್ನು ಹೇಳಿ. ಇಲ್ಲಿ ‘ ಜಗತ್ತು ಒಂದು ನಾಟಕಶಾಲೆ ’ ಎಂಬುದು ಮುಖ್ಯವಾಕ್ಯಕ್ಕೆ ‘ ಎಂದು ’ ಎಂಬ ಪದದ ಸಂಬಂಧದಿಂದ ಅಧೀನವಾಗಿದೆ.

# ವಾಕ್ಯವಿಭಜನೆ

| ಸಂಖ್ಯೆ | ವಾಕ್ಯ | ಕರ್ತೃಪದ | ಕರ್ತೃ ವಿಶೇಷಣ | ಕರ್ಮಪದ | ಕರ್ಮ ವಿಶೇಷಣ | ಕ್ರಿಯಾಪದ | ಕ್ರಿಯಾ ವಿಶೇಷಣ | ಸಂಬಂಧ ಸೂಚಕ |
|---|---|---|---|---|---|---|---|---|
| ೧ | ಬೇಸಿಗೆಯ ಬಿಸಿಲು ಹಿಮಗಾಲದ ಮಂಜನ್ನು ಹರಿಸಿತು. | ಬಿಸಿಲು | ಬೇಸಗೆಯ | ಮಂಜನ್ನು | ಹಿಮಗಾಲದ | ಹರಿಸಿತು | — | — |
| ೨ | ಮಳೆ ಬರಲಿಲ್ಲ ; **ಆದರೂ** ಬೆಳೆ ಚೆನ್ನಾಗಿದೆ.* | ೧. ಮಳೆ<br>೨. ಬೆಳೆ | —<br>— | —<br>— | —<br>— | ಬರಲಿಲ್ಲ<br>ಇದೆ | —<br>ಚೆನ್ನಾಗಿ | ಆದರೂ |
| ೩ | 'ಜಗತ್ತು ಒಂದು ನಾಟಕ ಶಾಲೆ' **ಎಂದು** ಒಬ್ಬ ಕವಿ ಹೇಳಿದ್ದಾನೆ. | ೧. ಜಗತ್ತು<br>೨. ಕವಿ | —<br>ಒಬ್ಬ | ನಾಟಕಶಾಲೆ<br>— | ಒಂದು<br>— | (ಆಗಿದೆ)†<br>ಹೇಳಿದ್ದಾನೆ | —<br>— | ಎಂದು |

* ಸಂಬಂಧಸೂಚಕಗಳಿಗೆ ದಪ್ಪಕ್ಷರ ಹಾಕಿದೆ,

† ಇಲ್ಲಿ 'ಆಗಿದೆ' ಎಂಬುದು ಅಧ್ಯಾಹಾರ.

## ಅಭ್ಯಾಸ

(೧) ವಾಕ್ಯವಿಭಜನೆ—ಎಂದರೇನು ?

(೨) ಮಿಶ್ರವಾಕ್ಯಗಳನ್ನು ಹೇಗೆ ವಿಭಜಿಸಬೇಕು ?

(೪) ಈ ಕೆಳಗಿನ ವಾಕ್ಯಗಳನ್ನು ವಿಭಜಿಸಿ :—

೧. ದೇವರು ದೊಡ್ಡವನೆಂಬುದನ್ನು ಎಲ್ಲರೂ ಒಪ್ಪುವರು. ೨. ಮಳೆ ಬಂದಿದ್ದಿತು, ಆದ್ದರಿಂದ ಕೆರೆಕುಂಟೆಗಳು ತುಂಬಿವೆ. ೩. ಧೀರನಾದ ರಾಮನು ದುಷ್ಟರಾದ ರಾಕ್ಷಸರನ್ನು ಬೇಗ ಬೇಗ ಸಂಹರಿಸಿದನು. ೪. ಈ ವಿಚಾರವನ್ನು ತಿಳಿದ ಕೂಡಲೆ ಎಲ್ಲರೂ ಬೆಚ್ಚಿಬಿದ್ದರು. ೫. ಆ ಗ್ರಾಮಕ್ಕೆ 'ಅತ್ತಿಗುಂಡಿ' ಎಂದು ಹೆಸರು ಇದೆ. ೬. ಲಕ್ಷ್ಮಿ ಆ ಕೆಲಸವನ್ನು ಬೇಗ ಮಾಡಬಲ್ಲಳು. ೭. ಚಾಮುಂಡಿ ಬೆಟ್ಟವನ್ನು ಹತ್ತಲು ಒಂದು ಸಾವಿರ ಮೆಟ್ಟಲುಗಳಿವೆ. ೮. ಆದಿಕರ್ಣಾಟಕರು ಬಹಳ ಹಿಂದೆ ಬಿದ್ದಿದ್ದರು ; ಸರ್ಕಾರದವರು ಸಹಾಯಮಾಡಿ ಅವರನ್ನು ಮುಂದೆ ತಂದರು. ೯. ಬೇಸಿಗೆಯಲ್ಲಿ ತಂಪಾದ ಬೆಟ್ಟಗುಡ್ಡಗಳಿಗೆ ಹೋಗುವ ಪದ್ಧತಿ ಪಾಶ್ಚಾತ್ಯರಲ್ಲಿ ಹೆಚ್ಚಾಗಿದೆ. ೧೦. ಮಹಮ್ಮದ ಪೈಗಂಬರರು 'ಎಲ್ಲರೂ ಸಹೋದರಭಾವದಿಂದ ಇರಬೇಕಾದುದು ಧರ್ಮವಾಗಿದೆ' ಎಂದು ಬೋಧಿಸಿದರು.

---

## ಪಾಠ ೭

### ಲೇಖನ ಚಿಹ್ನೆಗಳು

ನಾವು ಮಾತನಾಡುವಾಗ ಧ್ವನಿಯಿಂದಲೂ, ಒತ್ತಿಹೇಳುವುದರಿಂದಲೂ, ಬೇಕಾದೆಡೆ ನಿಲ್ಲಿಸುವುದರಿಂದಲೂ ವಾಕ್ಯದ ಅರ್ಥವು ಕೇಳುವವರಿಗೆ ಸುಲಭವಾಗಿ ತಿಳಿಯುತ್ತದೆ. ನಾವು ಬರೆದುದನ್ನು ಓದುವವರಿಗೆ ಧ್ವನಿ ಮತ್ತು ಒತ್ತಿಹೇಳುವ ಸಹಾಯಗಳಿಲ್ಲ. ಓದುವವರಿಗೆ ಅರ್ಥವು ಸುಲಭವಾಗಿ ತಿಳಿಯುವುದಕ್ಕಾಗಿ ಕೆಲವು ಚಿಹ್ನೆಗಳನ್ನು ಉಪಯೋಗಿಸಬೇಕಾಗುತ್ತದೆ. ಈ ಚಿಹ್ನೆಗಳಿಗೆ 'ಲೇಖನ ಚಿಹ್ನೆಗಳು' ಎಂದು ಹೆಸರು.

### ಅಲ್ಪವಿರಾಮ (,)

೧. ಹಣ್ಣು, ಮರ, ಗಿಡ, ಬಳ್ಳಿ ಇವುಗಳನ್ನು ಕಾಡಿನಲ್ಲಿ ಚೆನ್ನಾಗಿ ನೋಡಬಹುದು.

೨. ರಾಮಾ, ಬೇಗ ಹೋಗು.

ಒಂದನೆಯ ವಾಕ್ಯದಲ್ಲಿ ಒಂದೇ ಅನ್ವಯವುಳ್ಳ ಪದಗಳನ್ನು ವಿಂಗಡಿಸುವುದಕ್ಕೂ, ಎರಡನೆಯ ವಾಕ್ಯದಲ್ಲಿ ಸಂಬೋಧನ ಪದವನ್ನು ಸೂಚಿಸುವುದಕ್ಕೂ ಒಂದು ಚಿಹ್ನೆಯನ್ನು ಉಪಯೋಗಿಸಿದೆ. ಇದಕ್ಕೆ 'ಅಲ್ಪವಿರಾಮಾ' ಎಂದು ಹೆಸರು.

### ಅರ್ಧವಿರಾಮ ( ; )

ಭಗವಂತನು ದೊಡ್ಡವನು; ಏಕೆಂದರೆ ಅವನು ಎಲ್ಲರನ್ನೂ ರಕ್ಷಿಸುತ್ತಾನೆ!

ಇಲ್ಲಿ ಒಂದಕ್ಕೊಂದು ಸಂಧಿಸುವ ಎರಡು ಉಪವಾಕ್ಯಗಳನ್ನು ಬಿಡಿಸುವುದಕ್ಕೆ ಒಂದು ಚಿಹ್ನೆಯನ್ನು ಉಪಯೋಗಿಸಿದೆ. ಇದಕ್ಕೆ '**ಅರ್ಧವಿರಾಮ**' ಎಂದು ಹೆಸರು.

### ಪೂರ್ಣವಿರಾಮ ( . )

ಜಗತ್ತಿನಲ್ಲಿ ದೇವರಿಗಿಂತ ದೊಡ್ಡವರಿಲ್ಲ.

ಮೇಲಿನ ವಾಕ್ಯದ ಕೊನೆಯಲ್ಲಿ ಒಂದು ಚಿಹ್ನೆಯನ್ನು ಹಾಕಿದೆ. ಇದಕ್ಕೆ 'ಪೂರ್ಣವಿರಾಮ' ಎಂದು ಹೆಸರು. ಇದನ್ನು ಪ್ರಶ್ನೆಯನ್ನೂ ಭಾವವನ್ನೂ ಸೂಚಿಸುವ ವಾಕ್ಯಗಳನ್ನು ಬಿಟ್ಟು ಉಳಿದ ವಾಕ್ಯಗಳ ಕೊನೆಯಲ್ಲಿ ಉಪಯೋಗಿಸಬೇಕು.

### ವಿವರಣ (:—)

ನಮ್ಮ ಮಹಾರಾಜರ ಕೀರ್ತಿ ಜಗತ್ತಿನಲ್ಲೆಲ್ಲಾ ಹರಡಿರುವುದೇಕೆಂದರೆ:— ಅವರು ಉದಾರಿಗಳೂ, ನ್ಯಾಯವನ್ನು ಬಿಡದವರೂ, ಪ್ರಜೆಗಳಲ್ಲಿ ಮಮತೆಯುಳ್ಳವರೂ ಆಗಿರುವುದು.

ಮೇಲೆ ಒಂದು ಚಿಹ್ನೆಯನ್ನು ಬಳಸಿದೆ. ಇದಕ್ಕೆ 'ವಿವರಣ ಚಿಹ್ನೆ' ಎಂದು ಹೆಸರು. ಇದು ಏನನ್ನಾದರೂ ವಿವರಿಸುವುದಕ್ಕೆ ಮೊದಲು ಬರುವುದು.

### ಪ್ರಶ್ನೆ ( ? )

ನೀನು ಏನು ಕೆಲಸವನ್ನು ಮಾಡಬಲ್ಲೆ ?

ಈ ವಾಕ್ಯದ ಕೊನೆಯಲ್ಲಿ ? ಚಿಹ್ನೆಯನ್ನು ಹಾಕಿದೆ. ಇದು ಪ್ರಶ್ನೆಯನ್ನು ಸೂಚಿಸುತ್ತದೆ. ಇದಕ್ಕೆ ' ಪ್ರಶ್ನೆಸೂಚಕ ಚಿಹ್ನೆ ' ಎಂದು ಹೆಸರು.

### ಭಾವಸೂಚಕ ( ! )

ಅಹಹಾ ! ಸೂರ್ಯನಿಗೂ ಗ್ರಹಣವೇ !

ಇದಕ್ಕೆ ' ಭಾವಸೂಚಕಚಿಹ್ನೆ ' ಎಂದು ಹೆಸರು. ಇದು ಆಶ್ಚರ್ಯ, ಕೋಪ, ಶೋಕ ಮುಂತಾದ ಮನೋಭಾವಗಳನ್ನು ಸೂಚಿಸುವುದು.

### ಅನುಕರಣ ( ' ' )

' ದೇವರಿಗಿಂತ ಹಿರಿಯರಿಲ್ಲ ' ಎಂದು ಒಬ್ಬ ಕವಿ ಹೇಳಿದ್ದಾನೆ.

ಮೇಲಿನ ವಾಕ್ಯದಲ್ಲಿ ಒಬ್ಬರು ಹೇಳಿದ ಮಾತನ್ನೇ ತಿರುಗಿ ಹೇಳಲು ' ' ಚಿಹ್ನೆಯನ್ನು ಉಪಯೋಗಿಸಿದೆ. ಇದಕ್ಕೆ ' ಅನುಕರಣಚಿಹ್ನೆ ' ಎಂದು ಹೆಸರು.

### ಆವರಣ ( )

ದೇವರು ದೊಡ್ಡವನು (ಆಗಿದ್ದಾನೆ).

ಒಂದು ಪದದ ಅರ್ಥವನ್ನು ಬೇರೆಯ ಪದದಿಂದ ಸೂಚಿಸುವಾಗ ( ) ಚಿಹ್ನೆಯನ್ನು ಉಪಯೋಗಿಸಿದೆ. ಇದಕ್ಕೆ ' ಆವರಣ, ಅಥವಾ ಕಂಸ ' ಎಂದು ಹೆಸರು.

### ಅಭ್ಯಾಸ

ಈ ಕೆಳಗಣ ವಾಕ್ಯಬೃಂದವನ್ನು ಲೇಖನ ಚಿಹ್ನೆಗಳನ್ನುಪಯೋಗಿಸಿ ಬರೆಯಿರಿ.—

ನಮ್ಮನ್ನು ನೋಡಿ ಗುರುಗಳು ಏಕೆ ಓಡುತ್ತೀರಿ ಎಂದು ಕೇಳಿದರು. ದೇವರು ಸೌದೆಯವನನ್ನು ನೋಡಿ ಜಗತ್ತಿನಲ್ಲಿ ಇಂತಹವರೂ ಇದ್ದಾರಲ್ಲಾ ಎಂದುಕೊಂಡನು. ಅಯ್ಯಾ ಮೂರು ಲೋಕಗಳಾವುವೆಂದರೆ ಭೂಮಿ ಸ್ವರ್ಗ ನರಕ. ನಡತೆ ಚೆನ್ನಾಗಿದೆ ಎಂಬ ವಾಕ್ಯದಲ್ಲಿ ನಡತೆ ಕರ್ತೃಪದ. ಯಕ್ಷನು ಧರ್ಮರಾಯನನ್ನು ಕುರಿತು ಅಯ್ಯಾ ಲೋಕದಲ್ಲಿ ಅತ್ಯಂತ ಆಶ್ಚರ್ಯಕರವಾದ ಸಂಗತಿ ಯಾವುದು ಎಂದು ಕೇಳಲು ಧರ್ಮರಾಯನು ಅಯ್ಯಾ ಯಕ್ಷನೇ ಪ್ರತಿದಿವಸವೂ ಜೀವರಾಶಿಗಳು ಯಮನ ಪಟ್ಟಣವನ್ನು ಸೇರುವುವು. ಇದನ್ನು ಕಂಡೂ ಉಳಿವವರು ಇಲ್ಲಿ ಸ್ಥಿರವಾಗಿರಬೇಕೆಂದು ಬಯಸುತ್ತಾರಲ್ಲಾ ಇದಕ್ಕಿಂತಲೂ ಆಶ್ಚರ್ಯಕರವಾದ ಸಂಗತಿ ಏನುಂಟು ಎಂದು ಹೇಳಿದನು.

---

## ಪಾಠ ೮

### ಅಪಭ್ರಂಶಗಳು

ನಾವು ಆಡುವ ಭಾಷೆ ಕನ್ನಡ. ಕನ್ನಡ, ತಮಿಳು, ತೆಲುಗು, ಮಲಯಾಳ — ಇವೆಲ್ಲಾ ಒಂದೇ ಗುಂಪಿಗೆ ಸೇರಿದವು. ಈ ಗುಂಪಿಗೆ ಸೇರಿದ ಭಾಷೆಗಳಿಗೆ ದ್ರಾವಿಡ ಭಾಷೆಗಳು ಎಂದು ಹೆಸರು. ಈ ದ್ರಾವಿಡ ಭಾಷೆಗಳು ದಕ್ಷಿಣ ಇಂಡಿಯಾದಲ್ಲಿ ಹೆಚ್ಚಾಗಿ ಬಳಕೆಯಲ್ಲಿವೆ. ಮೈಸೂರು, ಕೊಡಗು, ಬೊಂಬಾಯಿಗೆ ಸೇರಿದ ಉತ್ತರ ಕನ್ನಡ, ಧಾರವಾಡ, ಬೆಳಗಾಂ, ಬಿಜಾಪುರ ಜಿಲ್ಲೆಗಳು, ಮದರಾಸಿಗೆ ಸೇರಿದ ಅನಂತಪುರ, ಶಾಲ್ಯ, ಕೊಯಮತ್ತೂರು, ದಕ್ಷಿಣ ಕನ್ನಡ ಜಿಲ್ಲೆಗಳು, ಹೈದರಾಬಾದಿನ ದಕ್ಷಿಣ ಭಾಗ — ಈ ಪ್ರಾಂತ್ಯಗಳಲ್ಲಿ ಕನ್ನಡವು ಜನರು ಮನೆಯಲ್ಲಿ ಆಡುವ ಭಾಷೆಯಾಗಿದೆ. ನೆಲ, ಹೊಲ, ನಾಲ್ಕು, ಹೇಳು, ಕೇಳು, ಒಳ್ಳೆಯದು, ಬೆಳೆ, ನಡೆ ಮುಂತಾದುವು ಶುದ್ಧವಾದ ಕನ್ನಡದ ಮಾತುಗಳು. ಇವುಗಳಿಗೆ 'ಅಚ್ಚಗನ್ನಡ ಶಬ್ದಗಳು' ಎಂದು ಹೆಸರು.

ಉತ್ತರ ದೇಶಗಳಿಂದ ಆರ್ಯರು ಬಂದು ನಮ್ಮ ದೇಶದಲ್ಲಿ ನೆಲಸಿದಾಗ ಆರ್ಯರ ಭಾಷೆಯಾದ ಸಂಸ್ಕೃತದ ಮಾತುಗಳನ್ನು, ಈಗ ನಾವು ಇಂಗ್ಲಿಷ್ ಭಾಷೆಯ ಮಾತುಗಳನ್ನು ಕಲಿಯುತ್ತಿರುವಂತೆ ಕಲಿಯ ಬೇಕಾಗಿ ಬಂತು. ಅವುಗಳಲ್ಲಿ ಕೆಲವು ಕನ್ನಡದಲ್ಲಿ ಸಂಸ್ಕೃತದಲ್ಲಿದ್ದ ರೂಪದಲ್ಲಿಯೇ ಇವೆ.

ಭೂಮಿ, ಪರ್ವತ, ಜನ, ರಾತ್ರಿ, ಮನುಷ್ಯ, ನಮಸ್ಕಾರ, ಭಾಗ್ಯ, ಐಶ್ವರ್ಯ ಮುಂತಾದುವು.

ಕೆಲವು ಸಂಸ್ಕೃತ ಮಾತುಗಳು ಕನ್ನಡದಲ್ಲಿ ಸ್ವಲ್ಪ ವಿಕಾರ ಹೊಂದಿವೆ.

(ಆವರಣ ಚಿಹ್ನೆಗಳಲ್ಲಿರುವ ಸಂಸ್ಕೃತ ಪದಗಳಿಂದ ಈ ಪದಗಳು ಬಂದಿವೆ.)

| | |
|---|---|
| ಹಗ್ಗ (ಪ್ರಗ್ರಹ) | ಗಾಜು (ಕಾಚ) |
| ಕಂಚು (ಕಾಂಸ್ಯ) | ಕುಂಬಾರ (ಕುಂಭಕಾರ) |
| ಅಗುಳಿ (ಅರ್ಗಳ) | ಗಣಿ (ಖನಿ) |
| ಜೋಯಿಸ (ಜ್ಯೋತಿಷ) | ಸುಣ್ಣ (ಚೂರ್ಣ) |

ಕೆಲವು ಕಾಲವಾದ ಮೇಲೆ ಮಹಮ್ಮದೀಯರು ದಕ್ಷಿಣ ಇಂಡಿಯಾಕ್ಕೆ ದಂಡೆತ್ತಿ ಬಂದು ಇಲ್ಲಿಯೇ ನೆಲಸಿದರು. ಇವರು ಉಪಯೋಗಿಸುತ್ತಿದ್ದ ಹಿಂದೂಸ್ತಾನೀ (ಉರ್ದು) ಭಾಷೆಯ ಕೆಲವು ಮಾತುಗಳು ಸಂಸ್ಕೃತದ ಮಾತುಗಳಂತೆಯೇ ಕನ್ನಡಕ್ಕೆ ಸೇರಿಕೊಂಡವು. ಅವುಗಳಲ್ಲಿ ಕೆಲವು ಇವು :—

ಬದಲು, ಬದಲಾವಣೆ, ಚುನಾಯಿಸು, ಚುನಾವಣೆ, ಜಮೀನು, ಜಮೀನ್ದಾರ್, ರೈತ, ಗುಲಾಮ, ಸಲಾಮು, ಮಸೀದಿ, ಖಾಜೀ, ಸುಬೇದಾರ, ಅಮಲ್ದಾರ, ಕಛೇರಿ, ಕಾನೂನು, ಸರ್ಕಾರ, ರೂಪಾಯಿ, ಕಾಗದ, ಗಡಿಯಾರ, ಬಂದೂಕ, ಸವಾರ.

ಬಹು ಕಾಲದಿಂದಲೂ ನಮ್ಮ ದೇಶಕ್ಕೆ ಮಹಾರಾಷ್ಟ್ರದ ಮರಾಟೆಯವರ ಸಂಪರ್ಕವಿತ್ತು. ಆ ಮೂಲಕ ಮಹಾರಾಷ್ಟ್ರ ಭಾಷೆಯ ಕೆಲವು ಮಾತುಗಳು ಕನ್ನಡಕ್ಕೆ ಸೇರಿದವು. ಅವುಗಳಲ್ಲಿ ಕೆಲವು ಇವು:

ಬತ್ತೀಸ, ಚಪ್ಪನ್ನ, ಜೀಯ, ರಾವುತ.

ಇನ್ನೂ ಕೆಲವು ಕಾಲದ ಮೇಲೆ ಇಂಗ್ಲಿಷರು ನಮ್ಮ ದೇಶಕ್ಕೆ ಬಂದರು ; ಅವರು ಭರತಖಂಡವನ್ನು ಆಳುತ್ತಿದ್ದಾಗ ಸಂಸ್ಕೃತ, ಮಹಾರಾಷ್ಟ್ರ, ಹಿಂದೂಸ್ತಾನಿ ಭಾಷೆಗಳಿಂದ ಕೆಲವು ಮಾತುಗಳು ಕನ್ನಡಕ್ಕೆ ಸೇರಿದಂತೆಯೇ ಇಂಗ್ಲಿಷ್ ಭಾಷೆಯಿಂದಲೂ ಅನೇಕ ಮಾತುಗಳು ಕನ್ನಡಕ್ಕೆ ಸೇರಿಕೊಂಡವು. ಈಗಲೂ ಹೆಚ್ಚುಹೆಚ್ಚಾಗಿ ಸೇರುತ್ತಲೇ ಇವೆ. ಅವುಗಳಲ್ಲಿ ಕೆಲವು ಇವು :

| | | | |
|---|---|---|---|
| ರೈಲು | ಕಂದೀಲು | ಸಾಬೂನು | ಬೋರ್ಡು |
| ಕೋರ್ಟು | ಗುಳೋಪು | ಬೆಂಚು | ಬ್ಯಾಂಕು |
| ಲಾಯರು | ಪಿಟೀಲು | ಸ್ಲೇಟು | ಎಕರೆ |
| ಮೀಟಿಂಗು | ಮೈಲಿ | ಪೋಲೀಸು | ಕಾರ್ಡು |
| ಗಿಲೀಟು | ಹೋಟಲು | ಸಿನೀಮಾ | ಪ್ಲೇಗು, ಕಾಲರಾ |

ಮೇಲೆ ಹೇಳಿದ ಹಾಗೆ ಕನ್ನಡದಲ್ಲಿ ಅನೇಕ ಭಾಷೆಗಳಿಂದ ಬಂದ ಶಬ್ದಗಳು ಇವೆ.

ಕನ್ನಡಕ್ಕೆ ಸೇರಿದ ಶಬ್ದಗಳು ‘ಅಚ್ಚಗನ್ನಡ ಶಬ್ದಗಳು’, ಇತರ ಭಾಷೆಗಳಿಂದ ಬಂದ ಶಬ್ದಗಳು ‘ಅನ್ಯದೇಶ್ಯ ಶಬ್ದಗಳು’—ಹೀಗೆ ಕನ್ನಡ ಭಾಷೆಯ ಶಬ್ದಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು.

ಈಗಿನ ಕನ್ನಡ ಶಬ್ದಗಳು




ಸಂಸ್ಕೃತದಿಂದ ವಿಕಾರವನ್ನು ಹೊಂದದೆ ಬಂದಿರುವ ಶಬ್ದಗಳು ಲೆಕ್ಕವಿಲ್ಲದಷ್ಟಿವೆ. ಅವುಗಳನ್ನು ಇಲ್ಲಿ ಕೊಡಲಾಗುವುದಿಲ್ಲ.

ಹೀಗೆಯೇ ವಿಕಾರವನ್ನು ಹೊಂದಿ ಬಂದ ಸಂಸ್ಕೃತ ಶಬ್ದಗಳೂ ಹೆಚ್ಚಾಗಿಯೇ ಇವೆ. ಅವುಗಳಲ್ಲಿ ಹೆಚ್ಚು ಬಳಕೆಯಲ್ಲಿರುವ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ. [ಆವರಣ ಚಿಹ್ನೆಯಲ್ಲಿರುವುದು ವಿಕಾರವನ್ನು ಹೊಂದದ ಸಂಸ್ಕೃತ ಪದ.]

| | | |
|---|---|---|
| ಅಗುಳಿ (ಅರ್ಗಳ) | ಕಡ್ಡಿ (ಕಾಷ್ಠ) | ಕಾರ (ಕ್ಷಾರ) |
| ಅಚ್ಚು (ಅಕ್ಷ) | ಕತ್ತಿ (ಕರ್ತ್ರೀ) | ಕೀಲು (ಕೀಲ) |
| ಅಡವಿ (ಅಟವೀ) | ಕತೆ (ಕಥಾ) | ಕೀರ (ಕ್ಷೀರ) |
| ಆಣೆ (ಆಜ್ಞಾ) | ಕವಳ (ಕಬಳ) | ಕುಂಬಳ (ಕೂಷ್ಮಾಂಡ) |
| ಆಸೆ (ಆಶಾ) | ಕಂಚು (ಕಾಂಸ್ಯ) | |
| ಇಟ್ಟಿಗೆ (ಇಷ್ಟಿಕಾ) | ಕಂತೆ (ಕಂಥಾ) | ಕುಂಬಾರ (ಕುಂಭಕಾರ) |

